ಪಾಂಚಾಲರು ಎಂದು ಹೆಸರಾಗಿತ್ತು. ಪಾಂಚಾಲ ಸಂಘವು, ಕಮ್ಮಾರರು, ಅಕ್ಕಸಾಲಿಗರು, ಕಂಚುಗಾರರು, ಬಡಗಿಗಳು ಹಾಗೂ ಕಲ್ಲು ಕಟ್ಟಡ ನಿರ್ಮಾಪಕರನ್ನು ಹೊಂದಿತ್ತು. ತಮಿಳು ಪದ 'ಪಂಚಾಲತ್ತರ್' ಎಂದರೆ ಐದು ಕುಶಲಕರ್ಮಿಗಳೆಂಬ ಅರ್ಥ ಬರುತ್ತದೆ. ವೀರ ಪಾಂಚಾಲರು ಸರ್ಕಾರದ ತೆರಿಗೆಯಿಂದ ವಿಮುಕ್ತರಾಗಿದ್ದರು.

### 6.4.8 ವರ್ತಕ ಸಂಘಗಳ ಪ್ರಾಮುಖ್ಯತೆ

ಅಧಿಕಾರ ಹಾಗೂ ಪ್ರಾಬಲ್ಯದ ವಿಷಯದಲ್ಲಿ ಬಹುಶಃ ವೃತ್ತಿ ಸಂಘಕ್ಕಿಂತ ವ್ಯಾಪಾರಿ ಸಂಘವು ಹೆಚ್ಚಿನ ಪ್ರಾಮುಖ್ಯತೆಯನ್ನು ಹೊಂದಿತ್ತು. ಇದು ಅವಶಯಕವಾಗಿ ವರ್ತಕರ ಸಂಘವಾಗಿ ದೇಶದ ವಾಣಿಜ್ಯ ಜೀವನದಲ್ಲಿ ದೊಡ್ಡ ಪಾತ್ರವನ್ನು ನಿರ್ವಹಿಸಿತು ಕಸುಬಿನಲ್ಲಿ ಸಾಮರಸ್ಯತೆ ಸಮರೂಪವಾದ ಹಿತಾಸಕ್ತಿ ಸ್ಥಳೀಯ ಪ್ರದೇಶದಲ್ಲಿ ವಸತಿ ಹಾಗೂ ಹಲವು ಧಾರ್ಮಿಕ ಪಂಥಗಳ ಸದಸ್ಯತ್ವ ಇವುಗಳೆಲ್ಲವೂ ವರ್ತಕ ಸಂಘಗಳನ್ನು ರೂಪಿಸುವುದರಲ್ಲಿ ನಿರ್ಣಾಯಕ ಅಂಶಗಳಾಗಿದ್ದವು. ಅನೇಕ ಮಾರುಕಟ್ಟೆ ಪಟ್ಟಣಗಳಿದ್ದವು. ಇಂತಹವುಗಳಲ್ಲಿನ ವರ್ತಕರೊಂದಿಗೆ ರಾಜನು ಹೆಚ್ಚು ತಲೆ ಹಾಕುತ್ತಿರಲಿಲ್ಲ. ಆದರೆ ಥೇಂಬರ್‌ನ ಅಭಿಪ್ರಾಯದ ಪ್ರಕಾರ ಸ್ವತಂತ್ರ ಕಾನೂನುಗಳನ್ನು ಹೊಂದಿದ ವ್ಯಾಪಾರ ವಾಣಿಜ್ಯ ಸಂಬಂಧಗಳ ಪ್ರಾಬಲ್ಯತೆಯು ಎಲ್ಲೂ ಕಂಡುಬರಲಿಲ್ಲ.[108]

ನಗರ ಸಕಾರವು ಈ ಸಂಘಗಳನ್ನು ಸುತ್ತುವರೆದಿತ್ತು. ನಗರದ ಮುಖ್ಯಸ್ಥ ಅಥವಾ ನಗರ ಪಾಲಕನು ಸಾಮಾನ್ಯವಾಗಿ ಒಬ್ಬ ಪ್ರಮುಖ ನಾಯಕ ಅಥವಾ ಮುಕ್ಯಸ್ಥ ಇಲ್ಲವೇ ಆ ಸಂಘದ ಮುಖ್ಯಸ್ಥನಾಗಿರುತ್ತಿದ್ದನು. ಪಟ್ಟಣಸ್ವಾಮಿಯ ಪಾತ್ರ ಹಾಗೂ ಕಾರ್ಯಗಳ ಅಧ್ಯಯನವು ಆಡಳಿತ ಹಾಗೂ ಆರ್ಥಿಕ ಚಟುವಟಿಕೆಗಳ ವಿಷಯದಲ್ಲಿ ವರ್ತಕ ಸಂಘಗಳು ಹಾಗೂ ಪಟ್ಟಣಗಳ ನಡುವೆ ನಿಕಟ ಸಂಬಂಧವನ್ನು ತೋರಿಸುತ್ತದೆ. ನಮ್ಮ ಅಧ್ಯಯನ ಕಾಲದಲ್ಲಿ ವರ್ತಕ ಸಂಘಗಳು ಹೊಂದಿದ್ದ ಅಧಿಕಾರ ಹಾಗೂ ಕಾರ್ಯಗಳು ವಿಶೇಷ ಹಕ್ಕುಗಳು ಮತ್ತು ಪ್ರಾಬಲ್ಯವನ್ನು ಹಲವಾರು ಉದಾಹರಣೆಗಳನ್ನು ನೀಡುವುದರ ಮೂಲಕ ಸ್ಪಷ್ಟಪಡಿಸಬಹುದು.

### 6.4.9 ಐಯ್ಯಾವೊಳೆ

ದಕ್ಷಿಣ ಭಾರತದ ಜನ ಜೀವನದಲ್ಲಿ "ಐಯ್ಯಾವೊಳೆ" ಎಂಬ ವ್ಯಾಪಾರ ಶ್ರೇಣಿಯು ಪ್ರಮುಖ ಪಾತ್ರ ವಹಿಸಿದ್ದಿತು. ಕ್ರಿ.ಶ. 8ನೇ ಶತಮಾನದಿಂದ 17ನೇ ಶತಮಾನದವರೆಗಿನ ಭಾರತದ

ಶಾಸನಗಳು ಈ ಶ್ರೇಣಿ ವಿವರಗಳನ್ನು ತಿಳಿಸುತ್ತವೆ.[109] ಅವರು ತಮ್ಮ ಚೀಲಗಳಲ್ಲಿ ಬೆಲೆಯುಳ್ಳ ಸರಕುಗಳನ್ನು ಹೊಂದಿ ಎಲ್ಲ ರಾಷ್ಟ್ರಗಳು, ಗ್ರಾಮಗಳು, ನಗರಗಳು ಮತ್ತು ಪಟ್ಟಣಗಳನ್ನು ಸುತ್ತಾಡುತ್ತಿದ್ದ ವರ್ತಕರಾಗಿದ್ದರು.

ಈ ಶ್ರೇಣಿಗೆ ಒಂದು ನಿರ್ದಿಷ್ಟ ವ್ಯವಸ್ಥೆ ಮತ್ತು ಚರಿತ್ರೆ ಇದ್ದಿತು. ಸಾಮಾನ್ಯವಾಗಿ ರಾಜ ಅಥವಾ ಅವನ ಸರ್ಕಾರ ಅವರಲ್ಲಿ ಮನಸ್ತಾಪ ಅಥವಾ ಜಗಳಗಳಿಂದ ಸರ್ಕಾರದ ಪ್ರವೇಶ ಅವಶ್ಯಕವಾಗಿರದಿದ್ದರೆ ಅವುಗಳ ಕೆಲಸದಲ್ಲಿ ಪ್ರವೇಶಿಸುತ್ತಿರಲಿಲ್ಲ. ಐಯ್ಯಾವೊಳೆ ತನ್ನದೇ ಆದ ನಿಯಮಗಳನ್ನು ಹೊಂದಿದ್ದಿತು. ಅವರು ವೀರ ಬಳಂಜ ಮತದ ರಕ್ಷಣೆ ಮಾಡುವವರೆಂದು ಹೇಳುತ್ತಿದ್ದರು. ಅದರ ಸದಸ್ಯರು ಭಗವತಿ ದೇವತೆಯ ಆರಾಧಕರಾಗಿದ್ದರು. ಆ ಶ್ರೇಣಿಯಲ್ಲಿ "ಸಾವಿರ ಜಿಲ್ಲೆಗಳ" ಮೂವತ್ತೆರಡು ಉಚ್ಛ್ರಾಯ ಸ್ಥಿತಿಯಲ್ಲಿದ್ದ ತೀರ ಪ್ರದೇಶದ ನಗರಗಳು ಹದಿನೆಂಟು ಪಟ್ಟಣಗಳು ಮತ್ತು ಅರವತ್ತನಾಲ್ಕು ವ್ಯಾಪಾರ ಸಭೆಗಳು ಇವೆ ಮುಂತಾದ ವಿಭಾಗಗಳಿದ್ದವು. ಅದರ ಸದಸ್ಯರು ಅನೇಕ ರಾಷ್ಟ್ರಗಳನ್ನು ಸುತ್ತಿ ಭೂಜಲಮಾರ್ಗಗಳಿಂದ ಆ ರಾಷ್ಟ್ರಗಳಿಗೂ ಹೋಗಿದ್ದರೆಂದು ಹೇಳುತ್ತಿದ್ದರು.[110] ಶಿಕಾರಿಪುರದ ಒಂದು ಶಾಸನವು[111] ಈ ವರ್ತಕರ ಉದ್ದವಾದ ಪ್ರಶಂಸೆಯನ್ನು ಕೊಡುತ್ತದೆ ಅವರು ಬಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೋಕಿನ ಐಹೊಳೆಯಲ್ಲಿ ಕೇಂದ್ರ ಕಛೇರಿ ಹೊಂದಿದ್ದರು. ಕೋಲಾರದ ಒಂದು ಶಾಸನವು ಅವರು ತಮ್ಮನ್ನು "ಐಯ್ಯಾವೊಳೆ ಪುರ ಪರಮೇಶ್ವರಿ"ಯ ಮಕ್ಕಲ್ ಮತ್ತು ಭಾಗವತಿಯ ಮಕ್ಕಲ್" ಎಂದು ಹೇಳಿಕೊಳ್ಳುತ್ತಿದ್ದರೆಂದು ತಿಳಿಸುತ್ತದೆ.[112]

ಅವರು ಕೂಡ "ಪಟ್ಟಣಸ್ವಾಮಿ" ಎಂಬ ನಾಯಕನನ್ನು ಹೊಂದಿದ್ದರೆಂದು ಕಾಣುತ್ತದೆ. ಈ ಶ್ರೇಣಿಯ ಸಂವಿಧಾನವನ್ನು ತಿಳಿಯಲಾಗುವುದಿಲ್ಲ ಆದರೆ "ಸ್ವಾಮಿಗಳು" ಯಾವಾಗಲೂ ಅದು ಐನೂರು ಸದಸ್ಯರುಗಳನ್ನೊಳಗೊಂಡ ಕಾರ್ಯ ನಿರ್ವಾಹಕ ಸಮಿತಿಯಾಗಿದ್ದಿತ್ತು. ಆ ಶ್ರೇಣಿಯು ತನ್ನಲ್ಲಿ ಗವರರು ಗತ್ರಿಗದು, ಶೆಟ್ಟಿಗಳು ಶೆಟ್ಟಿಗುಟ್ಟರು, ಅಂಕಕರರು, ಶೆಟ್ಟಿಪುತ್ರರು, ಬೀರವಣಿಗರು ನಾನಾ ದೇಶಿಗಳು, ನಾಡು, ನಗರ ಮತ್ತು ಇತರರನ್ನೊಳಗೊಂಡಿದ್ದಿತು.[113] ಚಂದ್ರಶೇಖರ ಶಾಸ್ತ್ರಿಯವರ ಪ್ರಕಾರ ಐಯ್ಯಾವೊಳೆ ವರ್ತಕ ಶ್ರೇಣಿಗಳ ಒಂದು ಸಮಗ್ರ ಸಂಘವಾಗಿರಬಹುದು.

### 6.4.10 ವೀರಬಣಜಿಗರು

ಕರ್ನಾಟಕ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಹೊಯ್ಸಳರ ಕಾಲದಲ್ಲಿ ವೀರಬಣಜಿಗರು ವಿಶೇಷ ಪ್ರಭಾವವನ್ನು ಹೊಂದಿದ್ದರು. ಬಲ್ಲಿಗ್ರಾಮ ಅವರ ಭದ್ರವಾದ ಒಂದು ನೆಲೆಯಾಗಿತ್ತು. ಇವರು ತಮ್ಮ ಹಕ್ಕುಗಳನ್ನು ಮತ್ತು ಬಿರುದುಗಳನ್ನು ಆತ್ಮಾಭಿಮಾನದಿಂದ ರಕ್ಷಿಸಿಕೊಳ್ಳುತ್ತಿದ್ದರು. ಕ್ರಿ.ಶ. 1182ರ ಒಂದು ಶಾಸನದಲ್ಲಿ 114 ಅವರು ತಮ್ಮ ವಿಚಾರವಾಗಿ ಪ್ರಶಂಸಾ ಪದಗಳನ್ನು ಉಪಯೋಗಿಸಿದ್ದಾರೆ.

ವೀರ ಬಣಜಿಗರು ಬಹಳ ಪ್ರಸಿದ್ಧವಾದ ವರ್ತಕರ ಗುಂಪಾಗಿದ್ದರು.115 ಸಲಿಕೆಯ ಬಲ್ಲಾಳುಗಳು ಉದ್ಯಮಿ ಸಂಘದ ಸದಸ್ಯರಾಗಿದ್ದರೆಂದು ಕಂಡುಬರುತ್ತದೆ. ಈ ಸಂಘದ ಸದಸ್ಯರಿಗೆ ಸಲಿಕೆಯ ಸಂಪರ್ಕವಿತ್ತು. ಇವರು ಪ್ರಮುಖ ನಾಗರೀಕರಾಗಿದ್ದರೆಂದು ತಿಳಿದುಬರುತ್ತದೆ. ಈ ರೀತಿಯಾಗಿ ವ್ಯಾಪಾರಿ ಸಂಘಗಳು ಹೊಯ್ಸಳರ ಕಾಲದಲ್ಲಿ ವಿಶೇಷವಾಗಿ ವ್ಯಾಪಾರ ಕೇಂದ್ರಗಳಲ್ಲಿ ಪ್ರಬಲ ಶಕ್ತಿಗಳಾಗಿದ್ದವೆಂದು ತಿಳಿದು ಬರುತ್ತದೆ. ಅವರ ಆರ್ಥಿಕ ಸ್ಥಿತಿಯು ವ್ಯಾಪಾರಿಗಳಿಗೆ ಸಮಾಜದಲ್ಲಿ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿತ್ತು. ಅವರು ಪಟ್ಟಣ ಆಡಳಿತ ವಿಷಯಗಳಲ್ಲಿ ಸ್ಥಳೀಯವಾಗಿ ಪ್ರಬಲರಾಗಿದ್ದರು ಹಾಗೂ ನಗರ ಆರ್ಥಿಕ ಚಟುವಟಿಕೆಗಳಲ್ಲಿ ಶಕ್ತಿವಂತರಾಗಿದ್ದರು.

ಈ ಸಂಘಗಳ ಆಂತರಿಕ ಸಂಘಟನೆಯು ಒಂದು ನಿರ್ದಿಷ್ಟ ವಿಧಾನವನ್ನು ಅನುಸರಿಸಿತ್ತು. ಇದನ್ನು ಒಬ್ಬ ಹಿರಿಯ ನಾಯಕನು ನಿರ್ವಹಿಸುತ್ತಿದ್ದನು. ಹಾಗೂ ಅವನ ಹುದ್ದೆಯು ವಂಶ ಪಾರಂಪರ್ಯವಾಗಿತ್ತು. ಈ ಸಂಘದ ನಾಯಕನನ್ನು ಹಿರಿಯ ಸದಸ್ಯರ ಒಂದು ಸಮಿತಿಯು ಬೆಂಬಲಿಸುತ್ತಿತ್ತು. ಪ್ರತೀ ಸಂಘವು ತನ್ನದೇ ಆದ ಚಿಹ್ನೆ ಹಾಗೂ ರಾಜಲಾಂಛನವನ್ನು ಹೊಂದಿತ್ತು. ವ್ಯಾಪಾರಿ ಸಂಘಗಳು ಹಂಚಿಕೆಯ ವಿಷಯಕ್ಕೆ ಸಂಬಂಧಿಸಿದಂತೆ ಪ್ರಬಲರಾಗಿದ್ದರೆ ವೃತ್ತಿ ಸಂಘಗಳು ಉತ್ಪಾದನಾ ವಿಷಯಗಳಲ್ಲಿ ಅಧಿಪತ್ಯವನ್ನು ಹೊಂದಿದ್ದವು. ಆರ್ಥಿಕ ಜೀವನದಲ್ಲಿ ವಿಶೇಷಚವಾಗಿ ನಗರಕ್ಕೆ ಸಂಬಂಧಪಟ್ಟಂತೆ ವೃತ್ತಿ ಹಾಗೂ ವರ್ತಕ ಸಂಘಗಳು ನಿರ್ವಹಿಸಿದ ಪಾತ್ರ ಅವುಗಳು ಹೊಂದಿದ್ದ ಅಧಿಕಾರ ಹಾಗೂ ಪ್ರಾಬಲ್ಯತೆಗಳು ಬಹಳ ಪ್ರಮುಖವಾಗಿದೆ.

### 6.4.11 ನಗರ ಸಮಾಜದ ಸ್ವರೂಪ

ವೈವಿಧ್ಯಮಯ ಸಾಮಾಜಿಕ ಲಕ್ಷಣಗಳನ್ನು ಹೊಂದಿರುವ ನಗರದ ಸ್ವರೂಪವು ಸಂಕೀರ್ಣವಾಗಿದೆ. ವೈವಿಧ್ಯತೆಯೇ ಅದರ ಗುಣವಾಗಿದೆ. ಅದರ ಸಾಮಾಜಿಕ ಸಂಯೋಜನೆ

ವೈವಿಧ್ಯತೆಯೇ ಅದರ ಗುಣವಾಗಿದೆ. ಅದರ ಸಾಮಾಜಿಕ ಸಂಯೋಜನೆಯು ನಾನಾ ಬಗೆಯ ಗುಂಪುಗಳು, ಜಾತಿಗಳು ಹಾಗೂ ವರ್ಗಗಳಿಂದ ರಚಿತವಾದುದಾಗಿದೆ. ಇದರ ಜೊತೆಗೆ ಗ್ರಾಮೀಣ ಸಮಾಜಕ್ಕೆ ಹೋಲಿಸಿದ್ದಲ್ಲಿ ನಗರ ಸಮಾಜವು ಹೆಚ್ಚು ಕ್ಲಿಷ್ಟವಾಗಿಲ್ಲ. ಆದ್ದರಿಂದ ನಗರ ಸಮಾಜವು ಪ್ರಗತಿಶೀಲವಾಗಿದೆ. ನಗರಗಳು ಹೊರಗಿನವರಿಗೆ ಮುಕ್ತವಾಗಿದೆ. ಥಾಕೂರ್‌ರವರ ಪ್ರಕಾರ ನಗರದ ಸಾಮಾಜಿಕ ವ್ಯವಸ್ಥೆಯು ಬಂಧುತ್ವಕ್ಕಿಂತ ಮಿಗಿಲಾಗಿ ವಸತಿಯ ಮೇಲೆ ಆಧಾರವಾಗಿದೆ ಹಾಗೂ ನಗರ ವಾಸಿಗಳು ಹಲವಾರು ಗುಂಪುಗಳಿಗೆ ಸೇರಿದವರಾಗಿದ್ದಾರೆ.[116] ನಗರ ಸನ್ನಿವೇಶದಲ್ಲಿ ಜಾತಿಯಲ್ಲಿನ ಕಠಿಣತೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಸಾಮಾಜಿಕ ಶ್ರೇಣಿಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಆಲೋಚನೆಗಳು ನಗರದ ವಾತಾವರಣದಲ್ಲಿ ತಮ್ಮ ಬೇರುಗಳನ್ನು ಕಳೆದುಕೊಳ್ಳುತ್ತವೆ.

**6.4.12 ಗುಂಪುಗಳು**

ಹೊಯ್ಸಳರ ಕಾಲದ ನಗರ ಸಮಾಜದ ಅಧ್ಯಯನ ಹಾಗೂ ಒಂದು ನಿರ್ದಿಷ್ಟ ಪಟ್ಟಣ ಅಥವಾ ಪಟ್ಟಣಗಳಲ್ಲಿನ ಸಾಮಾಜಿಕ ಸಂಯೋಜನೆಯ ವಿಶ್ಲೇಷಣೆಯಿಂದ ನಮಗೆ ತಿಳಿದುಬರುವ ಅಂಶವೇನೆಂದರೆ ನಗರ ಸಮಾಜವು ಸಂಕೀರ್ಣವಾದುದ್ದು ಹಾಗೂ ವೈವಿಧ್ಯಮಯವಾದುದ್ದು ನಗರೀಕರಣ ಪ್ರಕ್ರಿಯೆಯು ಸ್ವಲ್ಪ ಮಟ್ಟಿನ ಸರಳತೆ ಹಾಗೂ ಬದಲಾವಣೆಯನ್ನು ನಗರ ಸಮಾಜದಲ್ಲಿ ತರುವ ಮೂಲಕ ಪಟ್ಟಣಗಳ ಸಮಾಜ ಹಾಗೂ ಸಂಸ್ಕೃತಿಯ ಮೇಲೆ ತನ್ನ ಪ್ರಭಾವ ಬೀರುವಂತೆ ಮಾಡಿತು. ಸಮಕಾಲೀನ ನಗರ ಸಮಾಜವು ಮೇಲ್ವರ್ಗ ಹಾಗೂ ಮೇಲ್ವರ್ಗೇತರ ವಿಂಗಡನೆಯನ್ನು ಹೊಂದಿತ್ತು. ಅವುಗಳಲ್ಲಿ ಆಡಳಿತ ವರ್ಗ ರಾಜ, ದೊರೆಗಳು, ಮಂತ್ರಿಗಳು ಉನ್ನತ ಆಡಳಿತ ಹಾಗೂ ಸೇನಾ ಅಧಿಕಾರಿಗಳು, ಶ್ರೀಮಂತ ವರ್ತಕರು, ಶ್ರೇಷ್ಟ ಪುರೋಹಿತರು ಹಾಗೂ ಕೆಳ ಆಡಳಿತ ಮತ್ತು ಸೇನಾ ಸಿಬ್ಬಂದಿ ವೃತ್ತಿಪರರೆಂದರೆ ಲೆಕ್ಕಿಗರು, ಲೇಖಕರು, ಬೋಧಕರು, ವರ್ತಕರು, ಕುಶಲಕರ್ಮಿಗಳು ಹಾಗೂ ಶಿಲ್ಪಿಗಳು, ಸಾರ್ವಜನಿಕ ಮನೋರಂಜಕರು, ಹಾಡುಗಾರರು, ನರ್ತಕರು, ಕಲಾವಿದರು, ಸಂಗೀತಗಾರರು ಹಾಗೂ ಇತರ ತೃತೀಯ ಗುಂಪಿನವರೆಂದರೆ ಹೂವು ಮಾರುವವರು, ಕ್ಷೌರಿಕರು, ಅಗಸರು ಹಾಗೂ ಮನೆಗೆಲಸದ ಆಳುಗಳು ಹಾಗೂ ಈ ಗುಂಪಿನಲ್ಲಿ ವಿವಿಧ ಧಾರ್ಮಿಕ ಗಉಂಪಿನವರು ಇದ್ದರು.

### 6.4.13 ಮೇಲ್ವರ್ಗಗಳು ಹಾಗೂ ಮೇಲ್ವರ್ಗೇತರರು

ನಗರಗಳಲ್ಲಿ ಹೆಚ್ಚು ಪ್ರಭಾವೀ ಗುಂಪೆಂದರೆ ಉನ್ನತ ವರ್ಗವಾಗಿತ್ತು. ಈ ವರ್ಗವು ಅಗಾಧವಾದ ಸಾಮಾಜಿಕ ಪ್ರಾಬಲ್ಯವನ್ನು ಹೊಂದಿತ್ತು. ಸ್ಪೋಬರ್ಗ್ ಹೇಳುವಂತೆ ನಗರದಲ್ಲಿ ಒಂದು ಸಣ್ಣ ಮೇಲ್ವರ್ಗವು ರಾಜಕೀಯ ಪ್ರದೇಶಗಳಲ್ಲಿ ಹಾಗೂ ಶೈಕ್ಷಣಿಕ ವ್ಯವಸ್ಥೆಗಳಲ್ಲಿ ಪ್ರಮುಖ ಸ್ಥಾನವನ್ನು ಹೊಂದಿತ್ತು ಹಾಗೂ ಹೆಚ್ಚು ಕಡಿಮೆ ಒಂದು ರೀತಿಯ ನಿರಂಕುಶ ನಿಯಂತ್ರಣವನ್ನು ಹೊಂದಿತು.[117]

ಈ ಉನ್ನತ ವರ್ಗವು ರಾಜ, ಮಂತ್ರಿಗಳು, ರಾಜ್ಯಪಾಲರು, ಆಡಳಿತದ ಸಮೂಹ, ಬುದ್ಧಿಜೀವಿಗಳು, ಉನ್ನತ ಪುರೋಹಿತರು ಸೇನೆಯ ಮುಖ್ಯಸ್ಥರು ಶ್ರೀಮಂತ ವರ್ತಕರು ಹಾಗೂ ಇತರರಾಗಿದ್ದರು.[118] ಉನ್ನತ ವರ್ಗವು ತನ್ನ ಅಧೀನದಲ್ಲಿ ಭೌತಿಕ ಸಂಸ್ಕೃತಿ ಹಾಗೂ ಸಂಪನ್ಮೂಲ ಗಳನ್ನು ರಾಜಕೀಯ ಪ್ರಾಬಲ್ಯ ಮತ್ತು ಪವಿತ್ರ ಸಂಪ್ರದಾಯವನ್ನು ಹೊಂದಿತ್ತು. ಅದು ರಾಜಕೀಯ ಧಾರ್ಮಿಕ ಮತ್ತು ಆರ್ಥಿಕ ಶಕ್ತಿಗಳನ್ನು ತನಗೆ ಬೇಕಾದಂತೆ ಬಳಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿತ್ತು. ಈ ವರ್ಗದ ಕೆಳಗೆ ಇದ್ದ ನಗರ ಕೇಂದ್ರದ ಜನಸಂಖ್ಯೆಯು ಅಪಾರ ಸಂಖ್ಯೆಯ ಮೇಲ್ವರ್ಗೇತರ ಗುಂಪುಗಳಾಗಿದ್ದರು. ವರ್ತಕರು ಅಪಾರ ಸಂಖ್ಯೆಯ ಮೇಲ್ವರ್ಗೇತರ ಗುಂಪುಗಳಾಗಿದ್ದವು. ವರ್ತಕರು ಹಾಗೂ ಕಸುಬುದಾರರು ಉತ್ಪಾದನ ಮತ್ತು ಹಂಚಿಕೆಯ ವರ್ಗಗಳು, ಸೇವಾಸಿಬ್ಬಂದಿ ಹಾಗೂ ಕೆಳಗುಂಪುಗಳನ್ನು ಮೇಲ್ವರ್ಗೇತರರು ಎಂದು ಪರಿಗಣಿಸಲಾಗಿತ್ತು. ಶಿಲಾಶಾಸನ ಹಾಗೂ ಸಾಹಿತ್ಯಿಕ ಆಧಾರಗಳು ಹೊಯ್ಸಳರ ಕಾಲದ ಅನೇಕ ನಗರಕೇಂದ್ರಗಳು ಉನ್ನತವರ್ಗ ಹಾಗೂ ಮೇಲ್ವರ್ಗೇತರ ಸಾಮಾಜಿಕ ಗುಂಪುಗಳನ್ನು ಹೊಂದಿದ್ದವು.

ನಗರ ಸಮಾಜದ ಇನ್ನೊಂದು ಕುತೂಹಲಕಾರಿಯಾದ ಅಂಶವೇನೆಂದರೆ ನಗರ ಸಮಾಜವು ಕೆಲ ವ್ಯಕ್ತಿಗಳ ಗುಂಪುಗಳ ಸಂಯೋಜನೆಯಾಗಿರದೇ ಹಲವಾರು ಜಾತಿ, ಮತ, ವರ್ಗಗಳ ರಚನೆಯಾಗಿತ್ತು ಹಾಗೂ ಗುಂಪಿನ ಜೀವನ ಆ ಕಾಲದ ವೈಶಿಷ್ಟವಾಗಿತ್ತು. ವ್ಯಕ್ತಿಗಳು ಕೆಲವು ಗುಂಪುಗಳು ಅಥವಾ ಸಂಘ ಇಲ್ಲವೇ ಜಾತಿಗಳಿಗೆ ಸೇರದ ಹೊರತು ಸಮಾಜದಲ್ಲಿ ಯಾವುದೇ ಸ್ಥಾನವನ್ನು ಹೊಂದಿರಲಿಲ್ಲ. ಸಮಕಾಲೀನ ನಗರ ಸನ್ನಿವೇಶದ ಸಾಮಾಜಿಕ, ಆರ್ಥಿಕ, ಜೀವನದಲ್ಲಿ ಗುಂಪು ಸಂಘಟನೆಯು ಅತ್ಯಂತ ಪ್ರಮುಖ ಅಂಶವಾಗಿತ್ತು. ದಾನದತ್ತಿಗಳನ್ನು ಕೊಡುವುದರ ಜೊತೆಗೆ ಗುಂಪು ಚಟುವಟಿಕೆಯು ಸಂತೆಗಳನ್ನು ನಡೆಸುವುದು, ಹಳ್ಳಿಗಳನ್ನು ಪಟ್ಟಣಗಳಾಗಿ

ಪರಿವರ್ತಿಸುವುದು. ಹೊಸ ಪಟ್ಟಣಗಳನ್ನು ನಿರ್ಮಿಸುವುದು ಇತ್ಯಾದಿ ಚಟುವಟಿಕೆಗಳಿಂದ ಗುಂಪು ಚಟುವಟಿಕೆಯು ಗಮನ ಸೆಳೆದಿತ್ತು.

ಇಂತಹ ಚಟುವಟಿಕೆಗಳಲ್ಲಿ ಸ್ಥಳೀಯ ಅಂಗಗಳು ವೃತ್ತಿ ಸಂಘಟನೆಗಳು ಹಾಗೂ ಇತರ ಗುಂಪುಗಳು ಪಾಲ್ಗೊಳ್ಳುತ್ತಿದ್ದವು. ನಗರ ಚಟುವಟಿಕೆಗಳಲ್ಲಿ ವ್ಯಯಕ್ತಿಕ ಪಾಲ್ಗೊಳ್ಳುವಿಕೆಗೇನು ಕೊರತೆಯಿರಲಿಲ್ಲ ಎಂಬುದು ನಿಜ. ಆದರೆ ಅಂತಹ ಸಂದರ್ಭಗಳಲ್ಲಿ ವ್ಯಕ್ತಿಗಳು ಹೆಚ್ಚಾಗಿ ಆಡಳಿತ ವರ್ಗಕ್ಕೆ ಸೇರಿದವರಾಗಿರುತ್ತಿದ್ದರು. ಅಥವಾ ಶ್ರೀಮಂತ ವರ್ತಕರಾಗಿರುತ್ತಿದ್ದರು. ಅಥವಾ ಉನ್ನತ ವರ್ಗಕ್ಕೆ ಸೇರಿದ ಧಾರ್ಮಿಕ ವ್ಯಕ್ತಿಗಳಾಗಿದ್ದರು. ಅವರು ಸೇರಿದ್ದ ಒಂದು ಗುಂಪನ್ನು ಅವರು ಪ್ರತಿನಿಧಿಸುತ್ತಿದ್ದರು. ಇದರ ಜೊತೆಗೆ ಸಾಮಾಜಿಕ ಗುಂಪುಗಳು ತಮ್ಮ ಸಾಮಾಜಿಕ ಸ್ಥಾನಮಾನ ಗಳನ್ನು ಸುಧಾರಿಸಿಕೊಳ್ಳುವ ದೃಷ್ಟಿಯಿಂದ ಒಂದನ್ನೊಂದು ಪೈಪೋಟಿ ನಡೆಸುತ್ತಿದ್ದವು. ಇದು ನಗರದ ಲಕ್ಷಣವನ್ನು ಸೂಚಿಸುತ್ತಿತ್ತು. ನಗರೀಕರಣದ ಒತ್ತಡಕ್ಕೆ ಮಣಿದು ಈ ಬದಲಾವಣೆಗಳು ಮಾರ್ಪಟ್ಟವು.

### 6.4.14 ಪಟ್ಟಣದಲ್ಲಿನ ಜೀವನ

**ಎ. ಹಬ್ಬಗಳು**

ಪಟ್ಟಣಗಳಲ್ಲಿನ ಜೀವನವು ಹಲವು ವಿಧಗಳಲ್ಲಿ ಹಳ್ಳಿಗಿಂತ ಭಿನ್ನವಾಗಿತ್ತು. ಹಬ್ಬಗಳು, ಆಟಗಳು ಮನೋರಂಜನೆಗಳು ಪಟ್ಟಣದ ಜನರ ಬೇಸರ, ಆಲಸ್ಯ ಹಾಗೂ ಒಂದೇ ವಿಧವಾದ ದುಡಿಮೆಯಿಂದ ದೂರವಾಗಿದ್ದವು. ಹಬ್ಬಗಳು ಸ್ವರೂಪದಲ್ಲಿ ಧಾರ್ಮಿಕವಾಗಿದ್ದರು ರಾಜಕೀಯ ಹಾಗೂ ಸಾಮಾಜಿಕ ಪ್ರಾಮುಖ್ಯತೆಯನ್ನು ಹೊಂದಿದ್ದವು. ಇವುಗಳು ಜನಜೀವನದ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿದ್ದವು. ಸಮಕಾಲೀನ ಮೂಲಗಳು ವಿಶೇಷವಾಗಿ ಹಾಗೂ ನಗರಗಳಲ್ಲಿ ಜರುಗುತ್ತಿದ್ದ ಹಬ್ಬಗಳ ಬಗ್ಗೆ ಒಂದು ಸಂಪೂರ್ಣ ಚಿತ್ರಣವನ್ನು ನೀಡುತ್ತವೆ.

ಹೊಯ್ಸಳರ ಕಾಲದಲ್ಲಿ ಆಚರಿಸಲಾಗುತ್ತಿದ್ದ ಹಬ್ಬಗಳಲ್ಲಿ ಶಿವರಾತ್ರಿ, ದೀಪಾವಳಿ, ಸಂಕ್ರಮಣ, ಕಾರ್ತಿಕ ಹಬ್ಬಗಳು ಪ್ರಮುಖವಾಗಿದ್ದವು. ಸಾಮ್ರಾಜ್ಯದಲ್ಲಿ ಜನತೆ ಕುಸ್ತಿ, ಜೂಜಾಟ (ಪಗಡೆ ದಾಳ) ಸಂಗೀತ ಮತ್ತು ನೃತ್ಯ ಬೇಟೆಯಾಡುವುದು, ಈಜುವುದು, ನಾಟಕವನ್ನು ಮನೋರಂಜನೆಗಾಗಿ ಆಡುತ್ತಿದ್ದರು ಮತ್ತು ರಂಗಭೂಮಿ ನಾಟಕಗಳನ್ನು ಆಡುತ್ತಿದ್ದರು. ಇವರ

ಶಾಸನಗಳ ಪ್ರಕಾರ ಆಗಿನ ಕಾಲದ ದೇವಸ್ಥಾನಗಳಲ್ಲಿ ಹಾಡುಗಾರರು, ನೃತ್ಯ ಕಲೆಗಾರ್ತಿಯರು, ನೃತ್ಯಗಾರರು ಇದ್ದರು. ಕಲೆಗೆ ದೊರೆಗಳು ಮತ್ತು ಗಣ್ಯವ್ಯಕ್ತಿಗಳು ಪ್ರೋತ್ಸಾಹ ನೀಡುತ್ತಿದ್ದರು. ಮದ್ದಳೆ, ತಾಳ ಮುಂತಾದ ರೀತಿಯ ಸಂಗೀತ ವಾದ್ಯಗಳ ವಿಷಯ ಸಮಕಾಲೀನ ಸಾಹಿತ್ಯದಲ್ಲಿ ಕಂಡುಬಂದಿದೆ. ಸಂಗೀತವನ್ನು ವಿಶೇಷಚವಾಗಿ ಅಭ್ಯಾಸ ಮಾಡಿ ಮೆಚ್ಚಿಕೊಳ್ಳುತ್ತಿದ್ದರೆಂದು ತೋರುತ್ತದೆ. ರಾಣಿ ಶಾಂತಲಾದೇವಿ ಸಂಗೀತ ಮತ್ತು ನೃತ್ಯಗಳಲ್ಲಿ ಪ್ರವೀಣೆಯಾಗಿದ್ದಳು.

ಈ ರೀತಿಯಾಗಿ ಹಬ್ಬಗಳು ಲಲಿತಕಲೆಗಳಲ್ಲಿನ ಆಟಗಳು ಹಾಗೂ ಇತರ ಪ್ರದರ್ಶನಗಳು ಜನಜೀವನದ ಅವಿಭಾಜ್ಯ ಅಂಗವಾಗಿದ್ದು ಅತ್ಯಂತ ಮಹತ್ವವಾದ ಸಾಮಾಜಿಕ ಪ್ರಾಮುಖ್ಯತೆಯನ್ನು ಹೊಂದಿದ್ದವು. ಪಟ್ಟಣಗಳಲ್ಲಿನ ಜೀವನವು ಹಳ್ಳಿಯ ಜೀವನಕ್ಕಿಂತ ಭಿನ್ನವಾಗಿತ್ತು ಎಂದು ಹೇಳಬಹುದು.

## ಅಧ್ಯಾಯ ಮೂರರಿಂದ ಅಧ್ಯಾಯ ಆರರವರೆಗಿನ ಅಡಿಟಿಪ್ಪಣಿಗಳು

1. ಲೂಯಿಸ್ ಮುನ್ ಪೋರ್ಡ್ – ಚರಿತ್ರೆಯಲ್ಲಿ ಇತಿಹಾಸ ಲಂಡನ್ 1961 ಪು. 4
2. ಲೂಯಿಸ್ ಮುನ್ ಪೋರ್ಡ್ – ಅದೇ ಲಂಡನ್ 1961 ಪು. 5
3. ಹಾಸರ್, ಪಿ.ಎಂ – ಅರ್ಬನೈಜೇಷನ್ ಆನ್ ಓವರ್ ವ್ಯೂ ಮತ್ತು ರೋನಾಲ್ಡ ಜೋನ್ಸ್, ಎಸ್ಸೇಸ್ ಆನ್ ವರ್ಲ್ಡ್ ಅರ್ಬನೇಜೇಷನ್ ಲಂಡನ್ 1975 ಪು.49
4. ಥಾಕೂರ್ ವಿ.ಕೆ–ಅರ್ಬನೈಜೇಷನ್ ಇನ್ ಏಸ್ಸಿಯಂಟ್ ಇಂಡಿಯಾ ದೆಹಲಿ 1981 ಪು.30
5. ಹೆನ್ರಿಪಿರಿನ್ – ಮಿಡಿವಲ್ ಸಿಟೀಸ್ 1925 ಪು.10
6. ಗಿಡನ್ ಸ್ಟೆಬರ್ಗ್ – ದ ಪ್ರಿ ಇಂಡಸ್ಟ್ರಿಯಲ್ ಸಿಟಿ, ನ್ಯೂಯಾರ್ಕ್ 1969 ಪು.32
7. ಐಡನ್ ಸೌದಾಲ್ ಮತ್ತು ಪಾಕ್ಸ್ ಆರ್.ಜಿ.–ಅರ್ಬನ್ ಆಂದ್ರೋಪಾಲಜಿ ನ್ಯೂಯಾರ್ಕ್ 1973 ಪು.12
8. ಸ್ಟ್ಯಾನ್ಲಿ ಕೆ. ಶುಲ್ಸ್ – ಆನ್ ಅಪ್ರೋಚ್ ಟು ಥಿಯರಿ ಅಪ್ ಅರ್ಬನೈಜೇಷನ್ ಸ್ಟಡೀಸ್ ಇನ್ ಅರ್ಬನ್ ಹಿಸ್ಟರಿ ಅಮೃತಸರ ಪು.80
9. ಮಿಶ್ರ ಎಸ್.ಸಿ – ಅರ್ಬನ್ ಹಿಸ್ಟರಿ ಇನ್ ಇಂಡಿಯಾ ಪಾಸಿ ಬಲಿಟೀಸ್ ಅಂಡ್ ಪರ್ ಸ್ಪೆಕ್ಟೀವ್ಸ್ ಆಕೇಶನಲ್ ಪೇಪರ್ ಸೀರಿಸ್ (U, H, A, i)
10. ಮಿಶ್ರ ಎಸ್.ಸಿ. – ಅದೇ 1982 ಪು.87
11. ಮಿಶ್ರ ಎಸ್.ಸಿ. – ಅದೇ 1982 ಪು.88
12. ದತ್.ಬಿ.ಬಿ. – ಟೌನ್ ಪ್ಲಾನಿಂಗ್ ಇನ್ ಏಸ್ಸಿಯಂಟ್ ಇಂಡಿಯಾ ಚಿತ್ತಗಾಂಗ್ 1924 ಪು.50
13. ಸ್ಟುವರ್ಟ್ ಪಿಗಟ್ – ಸಮ್ ಏಸ್ಸಿಯಂಟ್ ಸಿಟೀಸ್ ಆಫ್ ಇಂಡಿಯಾ ಆಕ್ಸ್‌ಫರ್ಡ್ 1928 ಪು.58
14. ಪಾರಸ್ಟೆ. ಇ.ಡಿಬ್ಲ್ಯು – ಸಿಟೀಸ್ ಆಫ್ ಇಂಡಿಯಾ ನ್ಯೂಡೆಲ್ಲಿ 1977 ಪು.43
15. ಪೂರಿ. ಬಿ.ಎನ್ – ಸಿಟೀಸ್ ಆಫ್ ಎಸ್ಸಿಯಂಟ್ ಇಂಡಿಯಾ ಮೀರತ್ 1966 ಪು.36
16. ಅಮಿತಾರಾಯ್ – ವಿಲೇಜ್ ಟೌನ್ ಅಂಡ್ ಸೆಕ್ಯೂಲರ್ ಬಿಲ್ಡಿಂಗ್ ಇನ್ ಏಸ್ಸಿಯಂಟ್ ಇಂಡಿಯಾ ಕ್ರಿ.ಪೂ. ಸುಮಾರು 150 ಕ್ರಿ.ಶ. ಸುಮಾರು 350 ಕಲ್ಕತ್ತ ಪು.88
17. ಫರಿಯೇ ಜಿ. – ಎನ್ ಸಿಟೀಸ್ ಅಂಡ್ ಸಿವಿಲೈಜೇಷನ್ ಬಾಂಬೆ 1962 ಪು.60

18. ಘೋಷ್ ಎ. – ದಿ ಸಿಟಿ ಇನ್ ಅರ್ಲಿ ಹಿಸ್ಟರಿಕಲ್ ಇಂಡಿಯಾ ಶಿಮ್ಲಾ 1963 ಪು.80

19. ಥಾಕೂರ್ ವಿ.ಕೆ. – ಅದೇ ದೆಹಲಿ 1981 ಪು.32

20. ಅಪ್ಪಾದೊರೈ ಎ. – ಏಕನಾಮಿಕ್ ಕಂಡೀಷನ್ ಇನ್ ಏನ್ಸಿಯಂಟ್ ಇಂಡಿಯಾ (ಕ್ರಿ.ಶ. 1000–1300) ಮದ್ರಾಸ್ 1936 ಮತ್ತು ದೀಪಕ್ ರಂಜನ್ ದಾಸ್ ದ ಏಕನಾಮಿಕ್ ಹಿಸ್ಟರಿ ಆಫ್ ಡೆಕ್ಕನ್ ಪು.100

21. ಬರ್ಟನ್ ಸ್ಟೈನ್ – ದ ಸ್ಟೇಟ್ ಅಂಡ್ ದಿ ಅಗ್ರೇರಿಯನ್ ಆರ್ಡ್ರ್‌ರ್ ಇನ್ ಸೌತ್ ಇಂಡಿಯಾ ದೆಹಲಿ 1976 ಪು.33

22. ಟೆಲ್‌ಬಾಯ್ ವ್ಹೀಲರ್ – ಮದ್ರಾಸ್ ಇನ್ ದ ಓಲ್ಡ್ ಟೈಮ್ಸ್ ಮದ್ರಾಸ್ 1891 ಪು.40

23. ಶ್ರೀನಿವಾಸಚಾರ್ ಸಿ.ಆರ್. – ಕಂಚೀಪುರಂ ಥ್ರೂ ದಿ ಏಜಸ್ ದೆಹಲಿ 1979 ಪು.83

24. ತಿರುಮಲೈ ಆರ್. – ಸ್ಟಡೀಸ್ ಇನ್ ಏನ್ಸಿಯಂಟ್ ಟೌನ್‌ಷಿಪ್ ಆಫ್ ಪುಡುಕೊಟೈ, ಮದ್ರಾಸ್ 1981 ಪು.51

25. ದತ್ತ್. ಬಿ.ಬಿ – ಟೌನ್ ಪ್ಲಾನಿಂಗ್ ಇನ್ ಏನ್ಸಿಯಂಟ್ ಇಂಡಿಯಾ ಪು.285

26. ನಕ್ವಿ. ಹೆಚ್.ಕೆ. – ಅರ್ಬನ್ ಗ್ರೋತ್ ಇನ್ ದ ಪಂಜಾಬ್ ಪು.61

27. ಸಿಂಗ್ ಕೆ.ಎನ್. ದ ಟೆಂಟೋರಿಯಲ್ ಟೇಸಿಸ್ ಆಫ್ ಮಿಡೀವಲ್ ಟೌನ್ ಅಂಡ್ ವಿಲೇಜ್ ಇನ್ ಈಸ್ಟನ್ ಉತ್ತರ ಪ್ರದೇಶ್ ಸಂ. 58 1968 ಪು.203

28. ಡಂಕನ್ – ಕಮ್ಯೂನಿಟಿ ಸ್ಟೇಜ್ ಅಂಡ್ ದ ರೂರಲ್ ಅರ್ಬನ್ ಕಂಟಿನಮ್ ಪು.35

29. ಡೇವಿಡ್ ಪ್ರಕಾಕ್ – ಸೋಶಿಯಾಲಾಜೀಸ್ ಅರ್ಬನ್ ಅಂಡ್ ರೂರಲ್ ಪು.18

30. ಮಿಶ್ರ ಎಸ್.ಸಿ. – ಅದೇ ಪು.90

31. ಮಿಶ್ರ ಎಸ್.ಸಿ. –ಸಮ್ ಆ್ಯಸ್ಪೆಕ್ಟ್ಸ್ ಆಫ್ ದಿ ಸೆಲ್ಸ್ ಅಂಡ್ ಮಿನಿ ಸ್ಟರಿಂಗ್ ಇನ್‌ಸ್ಟಿಟ್ಯೂಷನ್ ಮಿಡೀವಲ್ ಇಂಡಿಯನ್ ಟೌನ್ ಪು.83

32. ಮಿಶ್ರ ಎಸ್.ಸಿ. – ಅದೇ 84

33. ಆಚಾರ್ಯ ವಿ.ಕೆ – ಮಾನಸಾರ. ಸಂ.6 ಪು. 102

34. ರಾವ್ ಎಮ್.ಎ – ಥಿಯೋರೆಟಿಕಲ್ ಪ್ರಾಬ್ಲಮ್ ಇನ್ ಡೆಕ್ಕನ್ ಅರ್ಬನ್ ಸೋಶಿಯಾಲಜಿ ಪು.16

35. ಜೈನ್ ಕೆ.ಸಿ. – ಏನ್ಸಿಯಂಟ್ ಸಿಟೀಸ್ ಅಂಡ್ ಟೌನ್ಸ್ ಆಫ್ ರಾಜಾಸ್ಥಾನ್ ದೆಹಲಿ 1972 ಪು. 78 79
36. ಮದ್ವಾಚಾರ್ಯ – ಪರಿಸರ ಮಾಧವ ಕಲ್ಕತ್ತ 1890 ಪು. 265
37. ವಿಜ್ಞಾನೇಶ್ವರ – ಮಿತಾಕ್ಷರ ಸಂಹಿತೆ ಪು.167
38. ವಿಜ್ಞಾನೇಶ್ವರ – ಅದೇ ಪು.169
39. ಆಚಾರ್ಯ ಪಿ.ಕೆ. – ಮನಸಾರ ಸಂ. 6 ಪು. 102 103
40. ಅಪ್ಪಾದೊರೈ ಎ – ಅದೇ ಪು.102
41. ಘರಿಯೇ ಜಿ.ಎಸ್. – ಸಿಟೀಸ್ ಅಂಡ್ ಸಿವಿಲೈಜೇಷನ್ ಬಾಂಬೆ 1962 ಪು.4
42. ಅಪ್ಪಾದೊರೈ ಎ – ಅದೇ ಪು.56
43. ಥಾಕೂರ್ ವಿ.ಕೆ. – ಅದೇ ಪು.46
44. ಥಾಕೂರ್ ವಿ.ಕೆ – ಅದೇ ಪು.48
45. ಸ್ಪ್ರೋಬರ್ಗ್ ಪ್ರೀ – ಇಚಿಡಸ್ಟ್ರಿಯಲ್ ಸಿಟಿ ಪು.31
46. ಥಾಕೂರ್ ವಿ.ಕೆ – ಅದೇ ಪು.47
47. ಥಾಕೂರ್ ವಿ.ಕೆ – ಅದೇ ಪು.48
48. ECV, BI 75
49. ಮೇಜರ್ ಇಂಡಿಯಾ – ಇನ್ ದ ಪೀಟೀನ್ ಸೆಂಚುರಿ ಪು.23
50. ಸ್ಪ್ರೋಬರ್ಗ್ – ಅದೇ ಪು.31
51. ಸ್ಪ್ರೋಬರ್ಗ್ – ಅದೇ ಪು.34
52. ಥಾಕೂರ್ ವಿ.ಕೆ – ಪು.50
53. ನಕ್ವಿ ಹೆಚ್.ಕೆ. – ಅರ್ಬನೈಜೇಷನ್ ಅಂಡ್ ಅರ್ಬನ್ ಅಂಡರ್ ದ ಗ್ರೇಟ್ ಮೋಘಲ್ ಪು.161
54. EC, Vol XI Cd 2
55. ಮಹಾಲಿಂಗಂ ಟಿ.ವಿ. – ಸೌತ್ ಇಂಡಿಯನ್ ಪಾಲಿಟಿ ಮದ್ರಾಸ್ 1967 ಪು 372

56. ಚಂಪಕ ಲಕ್ಷ್ಮಿ – ಅರ್ಬನ್ ಪ್ರೋಸಸ್ ಇನ್ ಅರ್ಲಿಮಿಡೀವಲ್ ತಮಿಳ್‌ನಾಡು ಆಕೇಶನಲ್ ಪೇಪರ್ ಸೀರೀಸ್ ವಿ.ಹೆಚ್.ವಿ. 1982 ಪುಟ 10

57. ನಾರಾಯಣಗುಪ್ತ – ಟೌನ್ಸ್ ಅಂಡ್ ಟ್ಯಾಂಕ್ ಟೆಂಪಲ್ಸ್ ಸಮ್ ಆ್ಯಸ್ಪೆಕ್ಟ್ಸ್ ಆಫ್ ಅರ್ಬನಿಸಂ ಇನ್ ಸೌತ್ ಇಂಡಿಯಾ ಏಯ್‌ಟೀಂತ್ ಅಂಡ್ ನೈನ್‌ಟೀಂತ್ ಸೆಂಚುರೀಸ್ 1983 ಪು.30

58. ನೀಲಕಂಠಶಾಸ್ತ್ರಿ ಕೆ.ಎ – ದಕ್ಷಿಣ ಭಾರತದ ಇತಿಹಾಸ ಪು 35–36

59. ಸಾಲೆತೊರೆ. ಬಿ.ಎ – ಕರ್ನಾಟಕಸ್ ಟ್ರಾಸ್ ಓಶಿಯಾನಿಕ್ ಕಾಂಟ್ರ್ಯಾಕ್ಸ್ ಧಾರವಾಡ 1956 ಪು.18

60. ಫಾಕ್ಸ್ ಆರ್.ಜಿ. – ಅರ್ಬನ್ ಆಂಥ್ರೋಪಾಲಜಿ ಪು.22–23

61. EC NII (R) PC x VI

62. EC NII VI 61

63. EC IV (R) Y.A1

64. M.A.R. 1939 ಪು.101-102

65. ECV BI 52

66. ರೈಸ್. ಬಿ.ಎಲ್ – ಮೈಸೂರು ಅಂಡ್ ಕೂರ್ಗ್ ಫ್ರಮ್ ಇನ್‌ಸ್ಕ್ರಿಪ್ಷನ್ ಲಂಡನ್ 1909 ಪು.155

67. E C V B U 233, 78.4

68. ರವೀಂದ್ರಕುಮಾರ – ಚೇಂಜಿಂಗ್ ಸ್ಟ್ರಕ್ಚರ್ ಆಫ್ ಅರ್ಬನ್ ಸೋಸೈಟಿ ಇನ್ ಕಾಲೋನಿಯಲ್ ಇಂಡಿಯಾ ದಿ ಇಂಡಿಯನ್ ಹಿಸ್ಟಾರಿಕಲ್ ರಿವ್ಯೂ ಸಂ 5 1979 ಪು 200

69. ಕಾಶಿ, ಎನ್.ಸಿಂಗ್ – ದ ಟೆರಿಟೊರಿಯಲ್ ಬೇಸಿಸ್ ಆಫ್ ಮೀಡೀವಲ್ ಟೌನಂ ಅಂಡ್ ವಿಲೇಜ್ ಸೆಟ್ಲುಮೆಂಟ್ ಇನ್ ಇಸ್ಟ್ರನ್ ಉತ್ತರ ಪ್ರದೇಶ್ ಸಂ. 58 1968 ಪು.203

70. E.C Ch VP 171

71. E.C VBI 75

72. E.C. Ch III P.105

73. SIIVII -298-299 ಶೆಟ್ಟರ್ ಎಸ್ – ಅರಸೀಕೆರೆ ಅಂಡರ್ ದ ಹೊಯ್ಸಳಾಸ್ ಜರ್ನಲ್ ಆಫ್ ಕರ್ನಾಟಕ ಯೂನಿವರ್ಸಿಟಿ ಸಂ. 7 1963

74. ಮೇಜರ್ – ಇಚಡಿಯಾ ಇನ್ ದ ಪಿಟೀನ್ ಸೆಂಚುರಿ ಪು. 20–22

75. ಶ್ರೀನಿವಾಸ್ ಎಂ.ವಿ. – ದಿ ಎವಲೂಶನ್ ಆಫ್ ದಿ ಆಫೀಸ್ ಆಫ್ ದ ಪಟ್ಟಣಸ್ವಾಮಿ ಇನ್ ದಿ ಮಿಡೀವಲ್ ಕರ್ನಾಟಕ ಧಾರವಾಡ, ಶಾಸನ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ

76. E.C. Vol X V B L 332 ಪು.86

77. ದೀಕ್ಷಿತ್ ಜಿ.ಎಸ್. – ಮಧ್ಯಕಾಲೀನ ಕರ್ನಾಟಕದಲ್ಲಿ ಸ್ಥಳೀಯ ಸರ್ಕಾರ ಪು.30

78. ಓಲ್ಡ್ ಎ.ಕೆ. ಸಂ. ಹೊಸಹೊಳಲು ಕೆ.ಆರ್.ಪೇಟೆ ತಾ. ನಂ. 3 ಪು.118

79. ಎ.ಕ.ಸಂ. VII ಹಟ್ಟಣ ನಾಗಮಂಗಲ ತಾ. ಪು.118

80. ಎ.ಕ.ಸಂ. 211 SB. INS. No.457 ಪು 278

81. ಎ.ಕ.ಸಂ. XI ದಾವಣಗೆರೆ ತಾ. ಪು 173

82. ಎ.ಕ.ಸಂ. IV ಮದ್ದೂರು ಗ್ರಾಮ, ಯಳಂದೂರು ತಾ. ಚಾಮರಾಜನಗರ ಜಿಲ್ಲೆ ಪು.744

83. ಎ.ಕ.ಸಂ. III ಉಪ್ಪಿನ ಹಳ್ಳಿ ನಂಜನಗೂಡು ತಾ.ಪು. 406

84. ಎ.ಕ.ಸಂ. IX ಪು 13

85. ಎ.ಕ.ಸಂ. XI ಪು 173

86. ಎ.ಕ.ಸಂ. ಪು. 168

87. ಎ.ಕ.ಸಂ. IX ಪು 31

88. ಎ.ಕ.ಸಂ. IX ಪು 13

89. ಎ.ಕ.ಸಂ. V ಪು 472

90. ಎ.ಕ.ಸಂ. VII ಪು 360

91. ಎ.ಕ.ಸಂ. IV ಪು 744

92. ಎ.ಕ.ಸಂ. XII ಪು 69

93. ಎ.ಕ.ಸಂ. I ಪು 34

94. ಎ.ಕ.ಸಂ. II ಪು 278

95. ಎ.ಕ.ಸಂ. VII ಪು 118

96. ಎ.ಕ.ಸಂ. VI ಪು 59

97. ಎ.ಕ.ಸಂ. XII ಪು 23

98. ಎ.ಕ.ಸಂ. XII ಪು 48

99. ಎ.ಕ.ಸಂ. V ಪು 325

100. ಎ.ಕ.ಸಂ. V ಪು 100

101. ಬೋಸ್ ಎ.ಎನ್ – ಅರ್ಲಿ ಇಂಡಸ್ಟ್ರಿಯಲ್ ಆರ್ಗನೈಜೇಷನ್ ಇನ್ ನಾರ್ತ್ ಇಂಡಿಯಾ ಪು.167

102. ಬೋಸ್ ಎ.ಎನ್ – ಅದೇ ಪು 169

103. ಅಪ್ಪಾದೊರೈ ಎ. – ಏಕನಾಮಿಕ್ ಕಂಡೀಷನ್ ಪು.357

104. ಬೋಸ್ ಎ,ಎನ್ – ಅದೇ ಪು 172

105. ಎ.ಆರ್.ಎಸ್.ಐ.ಇ. 1918 ಪ್ಯಾರಾ 84 85 E.I. X X ಪು 90

106. ಘಟಪಣನದಿ ಎಸ್.ಜಿ. – ಗಿಲ್ಡ ಅಫ್ ಆರ್ಟಿಸಾನ್ ಇನ್ ಮಿಡೀವಲ್ ಕರ್ನಾಟಕ ಸಂ.6 ಪು.195

107. ಛೇಂಬರ್ – ಅದೇ ಪು.80

108. ARSIE 1918 Copper Plate 18

109. E C I No. 4 E C V A K – 13

110. E C X, K I, 170

111. E C VII, SK, 94, 1094 A.D

112. ಚಂದ್ರಶೇಖರ ಶಾಸ್ತ್ರಿ – ಹೊಯ್ಸಳ ಕಾಲದ ಆರ್ಥಿಕ ಇತಿಹಾಸ ಪು.223

113. E C V BI – 75

114. SII VII - 185

115. ಥಾಕೂರ್ ವಿ.ಕೆ – ಅದೇ ಪು.140

116. ಸ್ಟೋಬರ್ಗ್ – ಅದೇ ಪು.11

# ಅಧ್ಯಾಯ 7
# ತಲಕಾಡು

## 7.1 ತಲಕಾಡಿನ ಐತಿಹಾಸಿಕ ಹಿನ್ನಲೆ

ತಲಕಾಡು ಮೈಸೂರು ಜಿಲ್ಲೆಯ ತಿರುಮಕೂಡಲ ನರಸೀಪುರ ತಾಲ್ಲೋಕಿನಲ್ಲಿರುವ ಒಂದು ಹೋಬಳಿ ಕೇಂದ್ರವಾಗಿದೆ. ತಲಕಾಡು ಕಾವೇರಿ ನದಿಯ ಎಡದಂಡೆಯಲ್ಲಿ ಮೂರುಕಡೆ ಸುತ್ತುವರಿಯಲ್ಪಟ್ಟು 12° 11° ಉತ್ತರ ಅಕ್ಷಾಂಶದಲ್ಲಿ ಹಾಗೂ 72° 2° ಪೂರ್ವ ರೇಖಾಂಶದಲ್ಲಿ ನೆಲೆಗೊಂಡಿದೆ. ಇದು ಇತಿಹಾಸ ಪ್ರಸಿದ್ಧ ಸ್ಥಳವಾಗಿದ್ದು ಟಿ.ನರಸೀಪುರದಿಂದ ನೇರ ಪೂರ್ವಕ್ಕೆ ಸುಮಾರು 12 ಕಿ.ಮೀ. (ರಸ್ತೆ ಮಾರ್ಗ 30 ಕಿ.ಮೀ) ದೂರದಲ್ಲೂ, ಮೈಸೂರಿನಿಂದ ಪೂರ್ವಕ್ಕೆ ರಸ್ತೆಯ ಮಾರ್ಗ 60 ಕಿ.ಮೀ. ದೂರದಲ್ಲಿದೆ. ಇದಕ್ಕೆ 'ತಲವನಪುರ' ಎಂಬ ಮತ್ತೊಂದು ಹೆಸರಿತ್ತು.[1]

## 7.2 ಸ್ಥಳ ಪುರಾಣ

ತಲಾ ಮತ್ತು ಕಾಡ ಎಂಬ ಕಿರಾತ ಸಹೋದರರಿಂದ ಇದಕ್ಕೆ ತಲಕಾಡು ಎಂಬ ಹೆಸರು ಬಂದಿತೆಂದು ಆನೆಯ ಜನ್ಮ ಪಡೆದಿದ್ದ ಸೋಮದತ್ತನೆಂಬ ಋಷಿಯು ಮತ್ತು ಅವನ ಶಿಷ್ಯರು ಇಲ್ಲಿ ಮೋಕ್ಷ ಪಡೆದುದರಿಂದ ಇದು ಗಣರಾಜ್ಯ ಕ್ಷೇತ್ರವಾಯಿತೆಂದು ಪೌರಾಣಿಕ ಕಥೆಯಿದೆ.

ಹಿಂದಿನ ಕಾಲದಲ್ಲಿ ಸೋಮದತ್ತನೆಂಬ ಒಬ್ಬ ಬ್ರಾಹ್ಮಣ ಸಂಸಾರದಲ್ಲಿ ವಿರಕ್ತಿ ತಳೆದು ತನ್ನ ಶಿಷ್ಯರೊಡನೆ ಕಾಶೀ ಕ್ಷೇತ್ರಕ್ಕೆ ಹೋಗಿ ಮೋಕ್ಷ ಪಡೆಯಲು ಕೈಲಾಸನಾಥನಾದ ಶಿವನನ್ನು ಕುರಿತು ಉಗ್ರವಾದ ತಪಸ್ಸನ್ನು ಆಚರಿಸಿದನು. ಆಗ ಶಿವ ಪ್ರತ್ಯಕ್ಷನಾಗಿ ಒಂದು ವರವನ್ನು ಬೇಡಲು ಸೋಮದತ್ತನಿಗೆ ಹೇಳಿದ ಮನುಷ್ಯ ಯಾವ ಸ್ಥಳಕ್ಕೆ ಹೋದರೆ ಜನನ ಮರಣಾದಿ ದುಃಖಗಳಿಗೆ ಆಸ್ಪದವಿಲ್ಲದೆ ಸದಾ ಆನಂದದಿಂದಿರಲು ಸಾಧ್ಯವೋ ಅಂಥ ಸ್ಥಳವನ್ನು ತಿಳಿಸಬೇಕೆಂದು ಸೋಮದತ್ತನು ಕೋರಿದನು. ಆಗ ಶಂಭು ಅವನಿಗೆ ಯಚೀಕ ಮಹರ್ಷಿಯ ಆಶ್ರಮವಿರುವ ಸಿದ್ದಾರಣ್ಯ ಕ್ಷೇತ್ರಕ್ಕೆ ಹೋಗಬೇಕೆಂದು ಆ ಸ್ಥಳದಲ್ಲಿ ತಾನು ವೈದ್ಯನಾಥನೆಂಬ ಹೆಸರಿನಿಂದ ನೆಲೆಸುವುದಾಗಿಯೂ ಹೇಳಿ ಅಂತರ್ದಾನದಿಂದ ಕಾವೇರಿ ಕಪಿಲ ನದಿಗಳ ಸಂಗಮ ಸ್ಥಾನದ ಹತ್ತಿರವಿದ್ದ ಈ ಸ್ಥಳಕ್ಕೆ ಸೋಮದತ್ತನು ತನ್ನ ಶಿಷ್ಯರೊಂದಿಗೆ ಪ್ರಯಾಣ ಬೆಳೆಸಿದರು. ವಿಂಧ್ಯ ಪರ್ವತಗಳ ಹತ್ತಿರ ಬಂದಾಗ ಆನೆಗಳು ಅವರನ್ನು ಕೊಂದವು. ಆಗ ಅವರು ಆನೆಗಳಾಗಿ ಹುಟ್ಟಿ ಈ ಸ್ಥಳವನ್ನು ಸೇರಿದರು.

ಇಲ್ಲಿ ಈಶ್ವರ ಒಂದು ಶಾಲ್ಮಲೀ ವೃಕ್ಷದ ಪೊದರಿನ ಕೆಳಗೆ ಲಿಂಗರೂಪಿಯಾಗಿರುವುದನ್ನು ಕಂಡು ಪ್ರತಿದಿನವು ಆನೆಯೊಂದು ಬಂದು ಸರೋವರದಲ್ಲಿ ಮಿಂದು ತನ್ನ ಸೊಂಡಲಿನಿಂದ ನೀರನ್ನು, ಅಲ್ಲಿ ಸಮೃದ್ಧವಾಗಿ ಬೆಳೆದಿದ್ದ ಸಸ್ಯಗಳನ್ನು ಸಂಗ್ರಹಿಸಿ ಪೊದೆಯಲ್ಲಿ ಹುದುಗಿದ್ದ ಲಿಂಗಕ್ಕೆ ಪೂಜೆಯನ್ನು ಸಲ್ಲಿಸುತ್ತಿತ್ತು.[2] ಆ ಪ್ರದೇಶದಲ್ಲೇ ಬೇಟೆ ಆಡುತ್ತಾ ಸಂಚರಿಸುತ್ತಿದ್ದ ತಲ ಮತ್ತು ಕಾಡ ಎಂಬ ಬೇಡ ಸಹೋದರರು ಆ ಆನೆಯ ವಿಚಿತ್ರ ಚರ್ಯೆಯನ್ನು ಹಲವು ಬಾರಿ ನೋಡಿ ಆಶ್ಚರ್ಯಗೊಂಡು ಬೂರುಗದ ಮರದಡಿಯ ಪೊದೆಯಲ್ಲಿ ಏನಡಗಿದೆಯೆಂದು ತಿಳಿಯುವ ಕುತೂಹಲದಿಂದ ಅಲ್ಲಿಗೆ ಧಾವಿಸಿ ಪೊದೆಯನ್ನು ಕಡಿಯಲಾರಂಭಿಸಿದರು. ಅವರ ಕೊಡಲಿಯು ಪೊದೆಯೊಳಗಿದ್ದ ಲಿಂಗಕ್ಕೆ ತಗುಲಿ ಲಿಂಗದಿಂದ ಚಿಮ್ಮಿದ ರಕ್ತ ಪ್ರವಾಹವನ್ನು ಕಂಡ ಅವರು ಭಯದಿಂದ ಮೂರ್ಛೆ ಹೋದರು. ಶಿವಕೃಪೆಯಿಂದ ಮೂರ್ಛೆ ಹೋಗಿದ್ದ ಅವರು ದೇವವಾಣಿಯ ಆದೇಶದಂತೆ ಬೂರುಗದ ಮರದ ಹಣ್ಣುಗಳನ್ನು ಅರೆದು ಲಿಂಗದ ಮೇಲಿನ ಗಾಯಕ್ಕೆ ಲೇಪಿಸಲು ಆಗ ರಕ್ತಸ್ರಾವವು ನಿಂತು ಗಾಯವು ಮಾಗಲು ಅವರಲ್ಲಿ ಸುಪ್ರಸಿದ್ಧನಾದ ಪರಮೇಶ್ವರನು ಭಕ್ತಾನುಗ್ರಹ ಮಾಡಲು ವೈದ್ಯನಾಥನೆಂಬ ಅನ್ವರ್ಥ ಅಭಿದಾನದಿಂದ ಅಲ್ಲೆ ನೆಲೆಸುವ ಸಂಕಲ್ಪ ಮಾಡಿದನು ಹಾಗೂ ಕೊಡಲಿಯ ಪೆಟ್ಟಿನಿಂದಾದ ಗಾಯದಿಂದ ಹೊರಬಂದಿದ್ದ ರಕ್ತವನ್ನು ಕ್ಷೀರವಾಗಿ ಪರಿವರ್ತಿಸಿ ಅದನ್ನು ಪ್ರಾಶಾನ ಮಾಡುವಂತೆ ಆ ಬೇಡರಿಗೆ ನಿರ್ದೇಶಿಸಲು ಆ ಹಾಲನ್ನು ಕುಡಿದ ಅವರು ಕೂಡಲೇ ಶಿವ ಸಾಯುಜ್ಯವನ್ನು ಹೊಂದಿದರು.[3] ಅಂದಿನಿಂದ ಈ ಕ್ಷೇತ್ರಕ್ಕೆ ಆ ಆನೆಗಳ ಜ್ಞಾಪಕಾರ್ಥವಾಗಿ ಗಜಾರಣ್ಯ ಕ್ಷೇತ್ರವೆಂದು, ನಂತರ ಅಲ್ಲಿ ನಿರ್ಮಾಣವಾದ ಊರಿಗೆ ಆ ಬೇಡರಿಬ್ಬರ ನೆನಪಾಗಿ 'ತಲಕಾಡು' ಎಂದು ಹೆಸರಾಯಿತು. ಸ್ಥೂಲವಾಗಿ ಇಷ್ಟು ತಲಕಾಡಿನ ಪುರಾಣೋಕ್ತ ಕಥೆ, ವೈದ್ಯನಾಥೇಶ್ವರ ದೇವಾಲಯದ ಪಕ್ಕದಲ್ಲಿರುವ ವೀರಭದ್ರೇಶ್ವರನ ಗುಡಿಯ ಮುಂದೆ ಆ ಬೇಡರರೆಂದು ಹೇಳಲ್ಪಡುವ ಶಿಲಾವಿಗ್ರಹಗಳನ್ನು ಈಗಲೂ ಕಾಣಬಹುದಾಗಿದೆ.

ತಲಕಾಡನ್ನು ಕುರಿತ ಪ್ರಥಮ ಉಲ್ಲೇಖ ಗಂಗರ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಮೊದಲು ಕೋಲಾರದಲ್ಲಿ ಆಳುತ್ತಿದ್ದ ಗಂಗರು ತನ್ನ ರಾಜಧಾನಿಯನ್ನು ಇಲ್ಲಿಗೆ ಬದಲಾಯಿಸಿದರು.[4] ತೀರ್ಥಕಲಾಕ್ಷೇತ್ರ ಸಂದರ್ಶಿನಿ, ಕರ್ನಾಟಕದ ಯಾತ್ರಾ ಸ್ಥಳಗಳು ಪು:213 ಗಂಗರಾಜನಾದ ಹರಿವರ್ಮ ಇಲ್ಲಿ ನೆಲೆಸಿದ್ದನೆಂದು ಒಂದು ಶಾಸನದಲ್ಲಿದೆ. ಗಂಗರಾಜನಾದ ಶ್ರೀಪುರುಷನ ಕಾಲದ ಶಾಸನಗಳು ಇಲ್ಲಿ ದೊರೆತಿವೆ. ತಲಕಾಡು ಚೋಳರ ಆಳ್ವಿಕೆಗೆ ಒಳಪಟ್ಟಾಗ ಇದನ್ನು ರಾಜರಾಜ ಪುರವೆಂದು ಕರೆದು ಅಲ್ಲಿ ಶಿವ ಮತ್ತು ವಿಷ್ಣು ದೇವಾಲಯಗಳನ್ನು ನಿರ್ಮಿಸಿದರು.

ಕ್ರಿ.ಶ. 1117 ಹೊಯ್ಸಳರ ವಿಷ್ಣುವರ್ಧನನ ದಂಡನಾಯಕನಾದ ಗಂಗರಾಜ ಚೋಳರ ಮೇಲೆ ಯುದ್ಧ ಮಾಡಿ ಅವರನ್ನು ಸೋಲಿಸಿ ತಲಕಾಡನ್ನು ವಶಪಡಿಸಿಕೊಂಡರು. ಇದರಿಂದ ವಿಷ್ಣುವರ್ಧನನು 'ತಲಕಾಡುಗೊಂಡ' ನೆಂಬ ಬಿರುದನ್ನು ಧರಿಸಿದನು. ವಿಷ್ಣುವರ್ಧನನು ತನ್ನ ವಿಜಯದ ಸೂಚಕವಾಗಿ ಕೀರ್ತಿನಾರಾಯಣ ಸ್ವಾಮಿ ದೇವಾಲಯವನ್ನು ಕಟ್ಟಿಸಿದರು. ನಂತರ ಮುಂದೆ ಬಂದವರು ಈ ದೇವಾಲಯಕ್ಕೆ ಅನೇಕ ದಾನ ದತ್ತಿಗಳನ್ನು ನೀಡಿದರು. ತಲಕಾಡನ್ನು ಹೊಯ್ಸಳರು 14ನೇ ಶತಮಾನದ ಮಧ್ಯಭಾಗದವರೆಗೆ ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರು. ತಲಕಾಡು ಈ ಸಮಯದಲ್ಲಿ ಅಭಿವೃದ್ಧಿಯನ್ನು ಹೊಂದಿ 7 ಪುರಗಳನ್ನು 5 ಮಠಗಳನ್ನು ಒಳಗೊಂಡು ಹೊಯ್ಸಳರ ಉಪರಾಜಧಾನಿಯಾಗಿ ಮೆರೆಯಿತು.[5]

### 7.3 ತಲಕಾಡಿನ ಆಡಳಿತ

ತಲಕಾಡು ಪಟ್ಟಣದ ಆಡಳಿತವು ಒಬ್ಬ 'ಸ್ಥಾನಪತಿ'ಯ ಹತೋಟಿಯಲ್ಲಿದ್ದಿತು. ಕ್ರಿ.ಶ. 933 ರಿಂದ 1334 ರವರೆಗೆ ತಲಕಾಡಿನ ಪೌರವ್ಯವಸ್ಥೆಯಲ್ಲಿ ನಾಲ್ಕು "ಪಟ್ಟಣಸ್ವಾಮಿ" ಗಳು 25 ಸದಸ್ಯರನ್ನೊಳಗೊಂಡ ಮಂಡಲಿ, ಪ್ರಜೆ, ಗೌಡರು ಸಭೆಗೆ ಸೇರಿದ "ಮಹಾನಗರ" ಅಥವಾ "ಪೌರಸಭೆ" ಏಳು ಪುರಗಳು ಮತ್ತು ಪಂಚಮಠವನ್ನೊಳಗೊಂಡ ತಲಕಾಡು ಪಟ್ಟಣದ ಅಧಿಕಾರಿ ಒಬ್ಬ ಸ್ಥಾನಪತಿ ಸೇರಿದ್ದರು.[6]

ಕ್ರಿ.ಶ. 1306 ರಲ್ಲಿ ಕುಂದಾಪುರದಲ್ಲಿ ಇಬ್ಬರು ಧಣಿಗಳು 'ನಾಯಕರು' ಇತರರೊಡಗೂಡಿ ಅದೇ ಗ್ರಾಮದ ಒಂದು ನಿವೇಶನವನ್ನು ಕೊಂಡು ಅದನ್ನು ದಾನ ಮಾಡಿದರು.7

ನಗರ ಅಥವಾ ಪೌರಸಭೆಯ ಅಧ್ಯಯನದಿಂದ ಆ ಸಭೆಯು ಈ ಕೆಳಕಂಡವರನ್ನೊಳಗೊಂಡಿತ್ತು.
1) 'ನಗರ' ಅಥವಾ ಆ ಸ್ಥಳದ ವಿವಿಧ ಶ್ರೇಣಿಗಳು 2) ಹಲವು ಸಂದರ್ಭಗಳಲ್ಲಿ "ಪ್ರಜೆ ಗೌಡರು" 3) "ಪುರಗಳು" ಮತ್ತು "ಬ್ರಹ್ಮಪುರಿಗಳು" 4) "ಮಠಗಳು" 5) "ಕಾರ್ಯನಿರ್ವಾಹಕ ಮಂಡಳಿ" 6) "ಪೌರಸಭಾಧಿಕಾರಿಗಳು".

### 7.4 ಗ್ರಾಮಾಡಳಿತ

ಹಳ್ಳಿಯು ಒಂದು ಚಿಕ್ಕ ಆಡಳಿತ ಘಟಕವಾಗಿತ್ತು. ಹಳ್ಳಿಯ ಆಡಳಿತದಲ್ಲಿ ಗಾವುಂಡನ ಪಾತ್ರ ಪ್ರಮುಖವಾಗಿತ್ತು. ಇವನನ್ನು "ಹೆಗ್ಗಡೆ" ಎಂದು ಕರೆಯಲಾಗುತ್ತಿತ್ತು. ಇವನು ಸರ್ಕಾರ ಹಾಗೂ

ಜನರನ್ನು ಪ್ರತಿನಿಧಿಸುತ್ತಿದ್ದನು. ಇವನು ರಾಜನಿಂದ ಅಥವಾ ಗ್ರಾಮಸಭೆಯಿಂದ ನೇಮಕಗೊಳ್ಳುತ್ತಿದ್ದನು. ಅವನಿಗೆ ಸಂಭಾವನೆಯನ್ನು ಗೇಣಿರಹಿತ ಇನಾಮ್ ಭೂಮಿ ಎಂಬ ರೂಪದಲ್ಲಿ ಕೊಡಲಾಗುತ್ತಿತ್ತು.[8] ಇವು ಹಳ್ಳಿಯನ್ನು ಭೂಮಿಯನ್ನು ಕೊಳ್ಳುವ ಮತ್ತು ಮಾರುವ ವ್ಯವಹಾರದಲ್ಲಿ ಶುಲ್ಕವನ್ನು ಪಡೆಯುತ್ತಿದ್ದನು.[9] ಇವನು ಆ ಗ್ರಾಮದ ನ್ಯಾಯಾಧೀಶನಾಗಿ ಸಣ್ಣ ಅಪರಾಧಗಳ ಕೇಸನ್ನು ತೀರ್ಮಾನಿಸುವ ಅಧಿಕಾರ ಹೊಂದಿದ್ದನು. ಸಾರ್ವಜನಿಕ ಕೆಲಸ ಕಾರ್ಯ ಸೇವೆಗಳನ್ನು ಮಾಡುವುದರಲ್ಲಿ ಪ್ರಮುಖನಾಗಿದ್ದನು. ಶಿಕ್ಷಣ ಸಂಸ್ಥೆಗಳನ್ನು ನಿರ್ಮಿಸುವುದು, ನೀರಿನ ತೊಂಬೆಗಳನ್ನು ನಿರ್ಮಿಸುವುದು,[10] ದೇವಸ್ಥಾನಗಳನ್ನು ನಿರ್ಮಿಸುವುದು ಇವೇ ಮುಂತಾದ ಕಾರ್ಯಗಳನ್ನು ಗಾವುಂಡನು ನಿರ್ವಹಿಸುತ್ತಿದ್ದನು.[11]

### 7.5 ಗ್ರಾಮಸಭೆ

#### 7.5.1 ಗ್ರಾಮಸಭೆಯ ರಚನೆ

ಗ್ರಾಮ ಸಭೆಯು ಅದರ ಸದಸ್ಯರ ಸಂಖ್ಯೆಯಿಂದ ರಚಿಸಲ್ಪಡುತ್ತಿತ್ತು. ಈ ಅಭ್ಯಾಸವು ಕರ್ನಾಟಕದಲ್ಲಿ ಹೊಯ್ಸಳರ ಹಿಂದಿನ ಕಾಲದಲ್ಲಿ ಆಚರಣೆಯಲ್ಲಿತ್ತು. ಉದಾಹರಣೆಗೆ ಬಾಲ್ಗುಳಿಯ ಐವತ್ತು ಎಂದು ಕಂಡುಬರುವುದು. ಇದು 'ಬಾಲ್ಗುಳಿಯ ಐವತ್ತು ಮಹಾಜನರು' ಎಂದು ಅರ್ಥವಾಗುತ್ತದೆ.[12] ಕ್ರಿ.ಶ. 1261 ರಲ್ಲಿ ಕುಡಿಕುರದ 300, ರಾಜಧಾನಿಯಾದ ಬಾರ್ಕೂ ಕನ್ಯಾಪುರದಲ್ಲಿ ಸೇರಿ ಸುವರ್ಣದಾನ ಮುಂತಾದವುಗಳನ್ನು ಮಾಡಿದರು.[13] ಈ ಸಂಖ್ಯೆಯು ಗ್ರಾಮಸಭೆಯನ್ನು ಸೂಚಿಸುವುದಲ್ಲದೆ ಆ ಗ್ರಾಮದಲ್ಲಿ ನೆಲೆಸಿದ್ದ ಸಂಸಾರಗಳ ಸಂಖ್ಯೆಯನ್ನು ತಿಳಿಸುತ್ತದೆ. ಸಿರುವುರ ಗ್ರಾಮದಲ್ಲಿ ಕ್ರಿ.ಶ. 1005 ರಲ್ಲಿದ್ದ ಐವತ್ತೊಕ್ಕಲು ಕ್ರಿ.ಶ. 1138 ರಲ್ಲೂ ಇದ್ದವು.[14]

ಗ್ರಾಮಗಳು ಸಹ ತಮ್ಮದೇ ಆದ ಸಭೆಗಳನ್ನು ಹೊಂದಿದ್ದವು. ನಗರಗಳು ಮತ್ತು ನಾಡುಗಳು ಎಂಬ ಎರಡು ಪ್ರಕಾರಗಳಲ್ಲಿ ಇದ್ದಂತೆ ಗ್ರಾಮಗಳು ಸಹ ಸಭೆಗಳನ್ನು ಹೊಂದಿದ್ದವು. ಇವುಗಳನ್ನು ಬಕ್ಕಲ, ಪ್ರಜೆ 18 ಸಮಯಸ್ ಹಾಗೂ ಚಾಗವೆ ಎಂಬುದಾಗಿ ಕರೆಯಲ್ಪಡುತ್ತಿತ್ತು.

ಕ್ರಿ.ಶ. 1278ರ ಶಾಸನದ ಪ್ರಕಾರ ಗಾಡಿಹಳ್ಳಿ (ಕೋಲಾರ) ಜಿಲ್ಲೆಯ ಸಮಸ್ತ ಪ್ರಜೆಗೌಡರನ್ನು ಬಲಾರ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ. 1267ರಲ್ಲಿ ಹದಿನೆಂಟು ಸಮಯ ವ್ಯಾಪಾರಸ್ಥರು ಒಳಗೂಡಿ ಗವರೇಶ್ವರ ದೇವಸ್ಥಾನ ಕಟ್ಟಲು ಭೂಮಿಯನ್ನು ಅನುದಾನವಾಗಿ ಬಿಡುಗಡೆ

ಮಾಡಿದರು.[15] ಕ್ರಿ.ಶ. 1280ರ ಹರಿಹರ ಎಂಬ ಸ್ಥಳದ ಶಾಸನದ ಪ್ರಕಾರವು ಒಡಿನೆಟ್ಟು ಸಮಯವು ಅಖಂಡ ಜನಸಂಖ್ಯೆಗಾಗಿ ಎಂದು ಹೆಸರಿಸಿದೆ.[16] ಚೌಗವೆಯು ಸಂಪೂರ್ಣ ಗ್ರಾಮದಿಂದ ಬೇರೆಯಾಗಿತ್ತು. ದೀಕ್ಷಿತ್‌ರವರ ಪ್ರಕಾರ ನಾಲ್ಕು ಗ್ರಾಮಗಳು ಸೇರಿದ ಮೇಲೆ ಸಭೆಯಾಗಿ ತನ್ನದೇ ಗ್ರಾಮ ಸಭೆಯು ವ್ಯವಹರಿಸುತ್ತಿತ್ತು. ಕ್ರಿ.ಶ. 1255 ರಲ್ಲಿ ಭೂ ಕೊಡುಗೆಯನ್ನು ಮುಖ್ಯಸ್ಥನ ಮತ್ತು ಎರಡು ಮುತ್ತಣ್ಣ ಹೊಸವರು ಮತ್ತು ಹಳ್ಳಿಗಳ ಪ್ರತಿನಿಧಿ ಚೌಗವೆ ಇನ್ನು ಮುಂತಾದವರ ಸಮಕ್ಷಮದಲ್ಲಿ ಕೊಡುಗೆಯನ್ನು ಕೊಡಲಾಗುತ್ತಿತ್ತು.

ಇಲ್ಲಿ ನಾಲ್ಕು ಗ್ರಾಮಸಭೆಗಳಿಗೆ ಕೊಡಮಾಡಲ್ಪಟ್ಟ ಭೂಮಿ ಅನುದಾನದ ಬಿಡುಗಡೆಯ ಬಗ್ಗೆ ನಿದರ್ಶನಗಳು ದೊರಕಿವೆ. ಆ ನಾಲ್ಕು ಗ್ರಾಮಗಳೆಂದರೆ ಪುರುಷೋತ್ತಮ, ದೇವನಿಂದ ಪದ್ಮನಾಭ ಪುರದ ಮಹಾಜನತೆಗೆ ಮದ್ದೂರು ಮಹಾಜನತೆಗೆ, ದೊಡ್ಡ ಅರಸಿನಕೆರೆ, ಮಂಡ್ಯ ಮತ್ತು ಮಲ್ಲಿಕಾರ್ಜುನಪುರ[17] ಈ ಗ್ರಾಮ ಸಭೆಗಳು ಗ್ರಾಮಾಡಳಿತವನ್ನು ನೋಡಿಕೊಳ್ಳುತ್ತಿದ್ದಲ್ಲದೆ ದೇವಾಲಯಗಳು, ಹುಲ್ಲುಗಾವಲುಗಳು, ಕೆರೆ, ರಸ್ತೆಗಳು ಮುಂತಾದವುಗಳ ಮೇಲ್ವಿಚಾರಣೆ ಮತ್ತು ದುರಸ್ತಿ ಕಾರ್ಯಗಳನ್ನು ಗ್ರಾಮಸಭೆಗಳು ನಿರ್ವಹಿಸುತ್ತಿದ್ದವು.[18]

### 7.6 ನಗರಾಡಳಿತ

ಸಾಮಾನ್ಯವಾಗಿ ನಾಡು, ನಗರ ಮತ್ತು ಹಳ್ಳಿಗಳನ್ನು ಒಳಗೊಂಡಿತ್ತು. ಪ್ರಾರಂಭದಲ್ಲಿ ಹಳ್ಳಿಗಳನ್ನು ನಗರಗಳಾಗಿ ಪರಿವರ್ತಿಸುವುದರಲ್ಲಿ ಹಳ್ಳಿಯ ನಾಯಕರ ಪಾತ್ರ ಬಹುಮುಖ್ಯವಾಗಿತ್ತು. ಹಳ್ಳಿಯ ದೊಡ್ಡ ವ್ಯಕ್ತಿ (ಪ್ರಭು) ಮತ್ತು ಮೊಗುರು ಇಲ್ಲಿ ವಾಸಿಸುವವರು, ಪರಸ್ಪರ ಒಪ್ಪಿಕೊಂಡು ಹಳ್ಳಿಯನ್ನು ನಗರವನ್ನಾಗಿ ಪರಿವರ್ತಿಸುತ್ತಿದ್ದರು. ಯಾರು ಮನೆಗಳನ್ನು ಹಳ್ಳಿಯನ್ನು ನಗರ ಪ್ರದೇಶದಲ್ಲಿ ಕಟ್ಟುತ್ತಾರೋ ಅವರಿಗೆ ಪ್ರಾರಂಭದ ಮೊದಲ ವರ್ಷದಿಂದಲೇ ತೆರಿಗೆ ವಿನಾಯಿತಿ ಇರುತ್ತಿತ್ತು. ಆದರೆ ಪರಸ್ಥಳದವರು ಮನೆಯನ್ನು ನಗರ ಪ್ರದೇಶದಲ್ಲಿ ಕಟ್ಟಿದರೆ ತೆರಿಗೆ ವಿನಾಯಿತಿ ಎರಡನೇ ವರ್ಷದಿಂದ ಲಭಿಸುತ್ತಿತ್ತು.[19]

ಕೆಲವು ವೇಳೆ ಗ್ರಾಮದ ಒಬ್ಬ ವ್ಯಕ್ತಿ ಗ್ರಾಮಗಳನ್ನು ನಗರಗಳನ್ನಾಗಿ ಮಾರ್ಪಡಿಸುವ ಕೆಲಸವನ್ನು ಕೈಗೊಂಡರೆ ಆ ಊರಿನ ಗ್ರಾಮದ ವ್ಯಕ್ತಿಗಳು ಅವನಿಗೆ ಬೆಂಬಲವನ್ನು ಕೊಡುತ್ತಿದ್ದರು. ಈ ಕೆಲಸಕ್ಕೆ ಆ ವ್ಯಕ್ತಿಗೆ ಸಂಭಾವನೆಯನ್ನು ಕೊಡಲಾಗುತ್ತಿತ್ತು. ಕ್ರಿ.ಶ. 1251ರಲ್ಲಿ ಮಲ್ಲಶೆಟ್ಟಿ ಎಂಬ

ಬಳೆಗಾರನ ಪ್ರಯತ್ನದಿಂದ ಗ್ರಾಮ ನಗರವಾಗಿ ಪರಿವರ್ತನೆಯಾಯಿತು. ಈ ಕೆಲಸಕ್ಕಾಗಿ ಮಲ್ಲಶೆಟ್ಟಿಗೆ ಗ್ರಾಮದ ಪ್ರಮುಖ ವ್ಯಕ್ತಿಯಿಂದ ಮತ್ತು ಆ ಗ್ರಾಮದ ಜನತೆಯಿಂದ ವಿಶೇಷ ದಾನವನ್ನು ಕೊಡಲಾಯಿತು. ಇದೇ ಅಲ್ಲದೆ ಅವನಿಗೆ ಒಂದು ನಿರ್ದಿಷ್ಟ ತೆರಿಗೆಯನ್ನು ಕೊಡಲು ಎಲ್ಲರೂ ಒಪ್ಪಿದರು.[20]

ಪಟ್ಟಣದಸ್ವಾಮಿ ನಗರವನ್ನು ಸ್ಥಾಪಿಸುತ್ತಿದ್ದನು ಹಾಗೂ ಪ್ರಾಧಿಕಾರದ ಮುಖ್ಯ ಕಾರ್ಯಕರ್ತನಾಗಿದ್ದನು. ಅವನು ಸಾಮಾನ್ಯವಾಗಿ ದೊಡ್ಡ ವ್ಯಾಪಾರಗಾರನಾಗಿದ್ದನು. ಅವನ ಕಾರ್ಯಗಳು ಊರಿನ ಗೌಡನ ಕಾರ್ಯಗಳಿಗೆ ಸಾಮ್ಯವಿರುತ್ತಿತ್ತು. ಅವರು ಸರ್ಕಾರದ ಹಾಗೂ ಗ್ರಾಮದ ಜನರ ವಿಶ್ವಾಸ ಗಳಿಸಿಕೊಂಡಿದ್ದರು. ಅವರು ಊರಿಗೆ ಬೇಕಾಗುವ ಅನುದಾನವನ್ನು ಕೊಡುವ ಕರ್ತವ್ಯವನ್ನು ಸಹ ಹೊಂದಿದ್ದರು. ಪಟ್ಟಣಸ್ವಾಮಿ ಶಂಕರರು ಹೊರಗಿನ ಊರಿನಿಂದ ಬರುವ ಬ್ರಾಹ್ಮಣರಿಗೆ ದಾನ ದತ್ತಿಯನ್ನು ಕೊಡುವ ಕಾಯಕವನ್ನು ಸಹ ಮಾಡುತ್ತಿದ್ದರು. ಅವರು ಗ್ರಾಮದ ಜನರ ಕುಂದುಕೊರತೆಗಳಿಗೆ ಸ್ಪಂದಿಸುತ್ತಿದ್ದರು. ಮತ್ತು ಜನರ ಸಮಸ್ಯೆಗಳನ್ನು ನಿವಾರಿಸುವ ಹಾಗೂ ಆಡಳಿತ ಮಾಡುವ ಅಧಿಕಾರವನ್ನು ಸಹ ಹೊಂದಿದ್ದರು.

ನಗರದಲ್ಲಿ ಪಟ್ಟಣಸ್ವಾಮಿಯಲ್ಲದೆ ಇತರ ಅಧಿಕಾರಿಗಳಿರುತ್ತಿದ್ದರು. ಅವರುಗಳೆಂದರೆ ಹೆಗ್ಗಡೆಗಳು ಹಾಗೂ ಸ್ಥಾನಪತಿಗಳು ಕ್ರಿ.ಶ. 1277 ರಲ್ಲಿ ಬೇಲೂರಿನಲ್ಲಿ ಸರ್ಕಾರಿ ನೌಕರನನ್ನು 'ಅಧಿಕಾರಿ' ಎಂದು ಕರೆಯಲಾಗುತ್ತಿತ್ತು.[21] ಆದರೆ ಇವರನ್ನು ತಲಕಾಡಿನಲ್ಲಿ ಸ್ಥಾನಪತಿಗಳೆಂದು ಕರೆಯಲಾಗುತ್ತಿತ್ತು.[22]

ನಗರ ಸಭೆಗೆ ಒಳಪಡಿಸುವ ಹಳ್ಳಿ, ಪಟ್ಟಣಗಳನ್ನು ನಗರ ಎಂದು ಕರೆಯಲಾಗುತ್ತಿತ್ತು. ಕಾಲಕ್ರಮೇಣ ಗ್ರಾಮಗಳು ಪಟ್ಟಣ ಆದಂತೆ ಹಳೆಯ ಶಿಕ್ಷಣ ಸಂಸ್ಥೆಗಳು ಹೊಸ ಸಂಘಟನೆಗಳೊಂದಿಗೆ ರೂಪುಗೊಂಡವು. ಹೀಗೆ ತಲಕಾಡಿನ ಹಿಂದಿನ ಪ್ರಜೆಗೌಡರು ಅಥವಾ ಮುಖ್ಯವ್ಯಕ್ತಿ ಹಾಗೂ ವಾಸಿಸುವ ಜನರು ಹೊಸ ಮೇಯರುಗಳು ಮತ್ತುನಗರ ಸಭೆಗಳಿಂದ ಆಳಲ್ಪಡುತ್ತಿದ್ದರು.[23] ನಗರ ಸಭೆಯು ದೊಡ್ಡ ವ್ಯಾಪಾರಸ್ಥರಿಂದ ಬ್ರಹ್ಮಪುರಿಯ ಮಹಾಜನರಿಂದ ಹಾಗೂ ಪುರದ ಪ್ರತಿನಿಧಿಗಳಿಂದ ರಚಿಸಲ್ಪಟ್ಟಿತು.[24]

ನಗರಗಳು ವಾರ್ಡ್ ಎಂಬುದಾಗಿ ವಿಭಾಗವಾಗಿತ್ತು. 'ಪ್ರಭು' ಎಂಬುವನು ವಾರ್ಡಿನ ಮುಖ್ಯಸ್ಥನಾಗಿದ್ದನು. ಕೆಲವು ವೇಳೆ ನಡೆಯುವ ಸಭೆಗೆ ಜನರೆಲ್ಲರು ಹಾಜರಾಗಬೇಕಾಗಿತ್ತು. ಕ್ರಿ.ಶ. 1266ರ ಮಾಹಿತಿಯ ಪ್ರಕಾರ ಎಲ್ಲ ವರ್ಗದವರು ಅಂದರೆ ಗಾವುಂಡರು, ವ್ಯಾಪಾರಸ್ಥರು, ಸ್ಥಾನಿಕರು, ಇಲ್ಲಮರುಡು 'ಯಳಂದೂರು' ನವರಾಗಿದ್ದರು. ಇವರುಗಳು ದಾನದತ್ತಿಗಳನ್ನು ಕೊಡುವ ವಾಡಿಕೆ ಇತ್ತು. ಹುಲಿಯೊಂದಿಗೆ ಧೈರ್ಯದಿಂದ ಹೋರಾಡಿದ್ದಕ್ಕಾಗಿ ಒಬ್ಬ ವ್ಯಕ್ತಿಗೆ ಇಂತಹ ಕೊಡುಗೆಯನ್ನು ನೀಡಲಾಗಿತ್ತು.[25]

### 7.7 ಅಗ್ರಹಾರಗಳು

ಕಿಟೆಲ್‌ರವರ ಪ್ರಕಾರ ಅಗ್ರಹಾರ ಎಂಬ ಪದದ ವ್ಯಾಖ್ಯೆಯನ್ನು ಹೀಗೆ ಮಾಡಬಹುದಾಗಿದೆ. ಬ್ರಾಹ್ಮಣ ವಿದ್ವಾಂಸರ ಜೀವನೋಪಾಯಕ್ಕೆ ಕೊಟ್ಟ ಗ್ರಾಮವೇ ಅಗ್ರಹಾರವಾಗಿತ್ತು. ಬ್ರಾಹ್ಮಣರು ತಮ್ಮ ಪಾಲನ್ನು ಅಗ್ರಹಾರದಲ್ಲಿ ಮಹಾಜನರಿಂದ ಸ್ವೀಕರಿಸುತ್ತಿದ್ದರು, ಭಾರತದ ಇತರೆ ಭಾಗಗಳಂತೆಯೇ ಮಧ್ಯಯುಗದ ಕರ್ನಾಟಕ, ತಮಿಳುನಾಡು ಮತ್ತು ಆಂಧ್ರಪ್ರದೇಶದಲ್ಲಿ ಅದು ಅಸ್ತಿತ್ವದಲ್ಲಿದ್ದಿತು. ಬ್ರಾಹ್ಮಣ ಪಾಲುಗಾರರನ್ನು ಮಹಾಜನರೆಂದು ಕರೆಯುತ್ತಿದ್ದರು. ಮಹಾಜನಸಭೆ ಅಗ್ರಹಾರದ ವಿಷಯಗಳ ಮೇಲ್ವಿಚಾರಣೆ ಹೊಂದಿದ್ದರು. ಹೊಯ್ಸಳರ ಕಾಲದಲ್ಲಿ ಅವುಗಳ ಅಸ್ತಿತ್ವಕ್ಕೆ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಹೆಚ್ಚಿನ ಸಾಕ್ಷ್ಯವಿದೆ. ಅಗ್ರಹಾರ ಸಭೆಗಳು ಅಲ್ಲಿನ ಮೇಲ್ವಿಚಾರಣೆ ಮತ್ತು ಇತರ ಪೌರ ಕರ್ತವ್ಯಗಳನ್ನು ಕೈಗೊಳ್ಳುತಿದ್ದವು. ಅವು ದೇವಸ್ಥಾನಗಳಿಗೆ ದತ್ತಿಗಳನ್ನು ಕೊಡುತ್ತಿದ್ದವು ಮತ್ತು ಸಾರ್ವಜನಿಕ ಹಿತಕಾರ್ಯಗಳನ್ನು ಕೈಗೊಳ್ಳುತ್ತಿದ್ದವು. ಅಗ್ರಹಾರಗಳು ಸಣ್ಣ ವಿಶ್ವವಿದ್ಯಾನಿಲಯ ಕೇಂದ್ರಗಳಾಗಿದ್ದವು. ಮಹಾಜನರು ವಿದ್ವಾಂಸರಾಗಿದ್ದರು. ಅಗ್ರಹಾರಗಳಿಗೆ ಸೈನಿಕರ ಮತ್ತು ತೆರಿಗೆ ವಸೂಲು ಮಾಡುವವರ ಅತಿಕ್ರಮಣವಿರಲಿಲ್ಲ. ರಾಜರು, ರಾಣಿಯರು, ಶ್ರೀಮಂತರು ಮತ್ತು ಬಡವರು ಅಗ್ರಹಾರಗಳಿಗೆ ದಾನದತ್ತಿ ನೀಡಿ ಆಸರೆಯಾಗಿದ್ದರು. ಈ ಸಂಸ್ಥೆಗಳು ಮಾಡುತ್ತಿದ್ದ ಸೇವೆ ನಿಜವಾಗಿಯೂ ಅದ್ಭುತವೂ ಮತ್ತು ಪ್ರಖ್ಯಾತವೂ ಆಗಿತ್ತೆಂಬ ಅಭಿಪ್ರಾಯವನ್ನು ಕರ್ಮರ್‌ಕರ್‌ರವರು ವ್ಯಕ್ತಪಡಿಸಿದ್ದಾರೆ.[26]

ಹೊಯ್ಸಳರ ಕಾಲದಲ್ಲಿ ಅಗ್ರಹಾರಗಳು ವಿವಿಧ ರೀತಿಯಲ್ಲಿ ಸ್ಥಾಪಿತವಾಗುತ್ತಿದ್ದವು. ರಾಜ ಅಥವಾ ಅವನ ಒಪ್ಪಿಗೆಯ ಮೇಲೆ ಅವನ ಅಧಿಕಾರಿಗಳು ಅಗ್ರಹಾರವನ್ನು ಸ್ಥಾಪಿಸುತ್ತಿದ್ದರು. ದಾನ ಪಡೆದವರು ಒಬ್ಬನೆ ಆಗಿರಬಹುದಿತ್ತು ಅಥವಾ ದಾನ ಪಡೆದವನು ಗ್ರಾಮದಲ್ಲಿ ಇತರರಿಗೆ

ಪಾಲುಗಳನ್ನು ಹಂಚುತ್ತಿದ್ದನು ಅಥವಾ ದಾನಿಯ ಇತರ ಪಾಲುದಾರರಿಗೆ ಭೂಮಿಯನ್ನು ಹಂಚುತ್ತಿದ್ದನು.

ಮಾಸವೆಗ್ಗಡೆ ಅಥವಾ ಮಾಸಿಕ ಅಗ್ರಹಾರದ ಪ್ರಮುಖ ವ್ಯಕ್ತಿಯಾಗಿದ್ದನು. ಕ್ರಿ.ಶ. 1261ರಲ್ಲಿ ತುಮಕೂರು ಜಿಲ್ಲೆಯ ಶೆಟ್ಟಿಕೆರೆ ಎಂಬ ಗ್ರಾಮದ ಅಂಕಿಅಂಶಗಳ ಪ್ರಕಾರ ಊರಿನ ಎಲ್ಲಾ ಮಹಾಜನರು ತಮ್ಮ ಅಗ್ರಹಾರದ ಹಲವು ಸೇವಾಸಂಸ್ಥೆಗಳು, ಶಿಕ್ಷಣ ಸಂಸ್ಥೆಗಳನ್ನು ಮಾಸಿಕ, ಮುಖ್ಯ ವ್ಯಕ್ತಿ ಅಥವಾ ಲೆಕ್ಕಿಗ 'ಸೇನಬೋವ' ಇವರುಗಳ ಸಹಾಯದಿಂದ ನಡೆಸಿಕೊಂಡು ಬರುತ್ತಿತ್ತು.[27] ಮಾಸವೆಗ್ಗಡೆ ಬಗ್ಗೆ ಮಾಹಿತಿಯು ತುರುವೇಕೆರೆ ಅಗ್ರಹಾರದಲ್ಲಿ ದೊರಕುತ್ತದೆ. ಕ್ರಿ.ಶ. 1263ರ ಶ್ರಾವಣ ಗೋವಿಂದ ಕ್ರಮಿತ ಮಾಸ ಕಾರ್ತಿಕ ಮಾಸದಲ್ಲಿ ಮೇಲೆ ತಿಳಿಸಿದ ಅಗ್ರಹಾರದಲ್ಲಿ ವಾಸುದೇವ ಕ್ರಮಿತ ಎಂಬುವವರು ಮಾಸವೆಗ್ಗಡೆಯಾಗಿದ್ದರು. ಕ್ರಿ.ಶ. 1267ರ ಚೈತ್ರಮಾಸದಲ್ಲಿ ಸಂಕಣ ಎಂಬುವವರು ಮಾಸವೆಗ್ಗಡೆಯಾಗಿದ್ದರು.[28]

ಅಧಿವೇಶನದ ಮಹಾಜನರು ಧಾರ್ಮಿಕ ಹಾಗೂ ದಾನದ ಕಾರ್ಯಗಳನ್ನು ಮಾಡುತ್ತಿದ್ದರು. ಮಹಾಜನರಿಗೆ ಹಲವು ಬಗೆಯ ಕರ್ತವ್ಯಗಳು ಇರುತ್ತಿದ್ದವು. ಗ್ರಾಮದಲ್ಲಿರುವ ದೇವಾಲಯಗಳನ್ನು, ಶಾಲೆಗಳನ್ನು, ನೀರಿನ ತೊಂಬೆಗಳನ್ನು ಸುರಕ್ಷಿತವಾಗಿರುವಂತೆ ನೋಡಿಕೊಳ್ಳುವುದು ಮಹಾಜನರ ಪ್ರಮುಖ ಕರ್ತವ್ಯವಾಗಿತ್ತು. ಇದಕ್ಕಾಗಿ ಧರ್ಮದರ್ಶಿಗಳು ಸಹ ನೇಮಕವಾಗಿದ್ದರು. ಇದರಿಂದಾಗಿ ಊರಿನ ಜನರು ಉತ್ತಮ ಪ್ರಜೆಗಳಾಗಿರಲು ಸಹಕಾರಿಯಾಗಿತ್ತು. ಗ್ರಾಮದ ಜನರು ಯಾವುದೇ ಸಾಮಾಜಿಕ, ಧಾರ್ಮಿಕ ಕಾರ್ಯಗಳನ್ನು ಮಾಡಬೇಕಾದರೆ ಉದಾ. ದೇವಸ್ಥಾನವನ್ನು ಕಟ್ಟಲು ಭೂಮಿ ಶಾಲೆ ತೆರೆಯಲು ಅನುಮತಿ ಇನ್ನು ಮುಂತಾದ ಶೈಕ್ಷಣಿಕ ಅಭಿನಂದನಾ ಸಂಸ್ಥೆಗಳನ್ನು ಕಟ್ಟಬೇಕಾದರೆ ಮಹಾಜನರ ಒಪ್ಪಿಗೆಯನ್ನು ಪಡೆದುಕೊಳ್ಳಬೇಕಾಗಿತ್ತು.[29] ಗ್ರಾಮದ ಆಡಳಿತವನ್ನು ನೋಡಿಕೊಳ್ಳಲು ಮಹಾಜನರು ಗ್ರಾಮಕ್ಕೆ ಹೊಂದಿಕೊಂಡಂತೆ ಒಂದು ಸ್ಥಳೀಯ ಪ್ರಾಧಿಕಾರವನ್ನು ರಚಿಸಿಕೊಂಡಿದ್ದರು.[30]

### 7.8 ಕೈಗಾರಿಕೆ

ಪ್ರತಿಯೊಂದು ದೇಶಕ್ಕೂ ಕೈಗಾರಿಕೆಯು ಬೆನ್ನುಲುಬಾಗಿದೆ. ದೇಶಕ್ಕೆ ಬರುವ ದೊಡ್ಡ ಆದಾಯವು ಕೈಗಾರಿಕೆಯಿಂದಾಗಿದೆ. ಶಾಸನದ ಪ್ರಕಾರ ಕೈಗಾರಿಕಾ ಉತ್ಪಾದನೆಗಳ ಮೇಲೆ ಕರ

ತೆರಿಗೆಗಳನ್ನು ವಿಧಿಸಲಾಗುತ್ತದೆ. ನಾವು ಇಲ್ಲಿ ಬಟ್ಟೆ ಕೈಗಾರಿಕೆ ಬಗ್ಗೆ ಪರಾಮರ್ಶನಕ್ಕಾಗಿ ತೆಗೆದು ಕೊಳ್ಳಬಹುದಾಗಿದೆ. ಶಿಲಾಶಾಸನಗಳು ನಿರ್ದಿಷ್ಟ ತೆರಿಗೆಗಳು ಮತ್ತು ಟೋಲ್‌ಗಳಿಗೆ ಸಂಬಂಧಿಸಿದ್ದಾಗಿದೆ. ಇವುಗಳನ್ನು ಯಾರ್ನ್ ನೂಲುದಾರರ ಮೇಲೆ ವಿಧಿಸಲಾಗುತ್ತಿತ್ತು.[31]

ಕೆಲವು ದಾಖಲೆಗಳ ಪ್ರಕಾರ ಉಣ್ಣೆ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು ಎಂದು ಹೇಳಬಹುದಾಗಿದೆ.[32] ಉಣ್ಣೆ ಬಟ್ಟೆಗಳನ್ನು ಉತ್ಪಾದಿಸುವುದರಲ್ಲಿ ದಾವಣಗೆರೆ ಮತ್ತು ದೊಡ್ಡ ಬಳ್ಳಾಪುರ ಎಂಬ ಎರಡು ನಗರಗಳು ಪ್ರಸಿದ್ಧಿ ಪಡೆದಿತ್ತು.[33]

ಬಣ್ಣ ಕಟ್ಟುವ ಕೈಗಾರಿಕೆಗಳ ಮೇಲೆ ಕೆಲವು ತೆರಿಗೆಗಳನ್ನು ವಿಧಿಸಲಾಗುತ್ತಿತ್ತು ಎಂಬ ಅಂಶವು ಬೆಂಗಳೂರು ಜಿಲ್ಲೆಯ ಕೆಲವು ಶಾಸನಗಳಿಂದ ತಿಳಿದು ಬರುತ್ತದೆ.[34] ಕಬ್ಬು ಬೆಳೆಗೆ ಈ ವೇಳೆ ಯೋಗ್ಯ ಕಾಲ. ತೆರಿಗೆಗಳನ್ನು ಕಬ್ಬು ಬೆಳೆಯ ಮೇಲೆ ವಿಧಿಸಲಾಗುತ್ತಿತ್ತು. ಇದನ್ನು 'ಅಳೆದರೆ' ಎಂದು ಕರೆಯುತ್ತಿದ್ದರು.[35] ಬೆಲ್ಲದ ಮೇಲೆ ವಿಧಿಸುವ ಕೆಲವು ನಿರ್ದಿಷ್ಟ ತೆರಿಗೆಗಳಿಂದ ಇದರ ಬಗ್ಗೆ ಮಾಹಿತಿ ತಿಳಿದು ಬರುತ್ತದೆ. ಬೆಲ್ಲವನ್ನು ಮಾರುಕಟ್ಟೆಯಲ್ಲಿ ತಂದಾಗ ಬರುವ ತೆರಿಗೆಗಳು ಸೇರಿವೆ.[36]

ಎಣ್ಣೆ ಕೈಗಾರಿಕೆಗಳು ಸಹ ಈ ಅವಧಿಯಲ್ಲಿ ಸರ್ವೇಸಾಮಾನ್ಯವಾಗಿದ್ದವು. 'ಗಣಕ ಸುಂಕ' ಎಂಬ ಹೆಸರಿನಲ್ಲಿ ಕರೆಯುವ ತೆರಿಗೆಯನ್ನು ಎಣ್ಣೆಯ ಮೇಲೆ ವಿಧಿಸಲಾಗುತ್ತಿತ್ತು.[37] ಕೆಲವು ದಾಖಲಾತಿಗಳ ಪ್ರಕಾರ ಎಣ್ಣೆಯನ್ನು ತೆಂಗಿನಕಾಯಿಯಿಂದ ತೆಗೆಯಲಾಗುತ್ತಿತ್ತು.[38]

ಬಳೆ ಮತ್ತು ಮಣಿಗಳನ್ನು ಉತ್ಪಾದನೆ ಮಾಡುವ ಕೈಗಾರಿಕೆಗಳ ಕೇಂದ್ರಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ಕ್ರಿ.ಶ. 1261 ರ ದಾಖಲೆಗಳ ಪ್ರಕಾರ ಸೇನಹಳ್ಳಿ, ಕಳ್ಳಕುಂದರಗಳ ಹಾಗೂ ನಿಟ್ಟೂರು ಬಳೆಗಳನ್ನು ಉತ್ಪಾದಿಸುವ ಪ್ರಮುಖ ಕೇಂದ್ರಗಳಾಗಿದ್ದವು.[39]

ಶಾಸನಗಳು ಭೂಗಣಿ, ಚಿನ್ನ ಹಾಗೂ ಕಬ್ಬಿಣದ ಕೈಗಾರಿಕೆಗಳ ಮೇಲೆ ವಿಧಿಸುವ ತೆರಿಗೆಗಳ ಬಗ್ಗೆ ಮಾಹಿತಿಯನ್ನು ನೀಡುವುದರಲ್ಲಿ ವಿಫಲವಾಗಿವೆ.[40] ಇದರ ಬಗ್ಗೆ ದಾಖಲೆಗಳನ್ನು ಗಣಿ ಸೂಪರಿಂಟೆಂಡೆಂಟ್‌ರವರಿಂದ ಪಡೆದುಕೊಳ್ಳಲಾಗಿದೆ.[41]

ದೇವಾಲಯಕ್ಕೆ ಚಿನ್ನದ ಕವಚಗಳನ್ನು ಆಗಾಗ್ಗೆ ಉಡುಗೊರೆಯಾಗಿ ನೀಡಲಾಗುತ್ತಿತ್ತು. ಬೆಂಗಳೂರಿನ ಕ್ರಿ.ಶ. 1278ರ ದಾಖಲೆಗಳ ಪ್ರಕಾರ ಬೆಳ್ಳಿ ತಟ್ಟೆಗಳನ್ನು ದೇವಾಲಯಗಳಿಗೆ ನೀಡಲಾಗುತ್ತಿತ್ತು. ಕಬ್ಬಿಣದ ಗಣಿ ಕೈಗಾರಿಕೆಯು ಒಂದು ಪ್ರಮುಖ ಕೈಗಾರಿಕೆಯಾಗಿತ್ತು. ಕಬ್ಬಿಣದ ಕೈಗಾರಿಕೆಗಳು ಉತ್ಪಾದಿಸುವ ಕಬ್ಬಿಣದ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು ಎಂಬ ಅಂಶವನ್ನು ಬರೆದಿಡಲಾಗಿದೆ.[42]

ಮರದ ದಿಮ್ಮಿ ಕೈಗಾರಿಕೆಗಳ ಬಗ್ಗೆ ಸಂಬಂಧಿಸಿದಂತೆ ನಿರ್ದಿಷ್ಟ ತೆರಿಗೆಯನ್ನು ಎತ್ತಿನಗಾಡಿಗಳ ಮೇಲೆ ವಿಧಿಸಲಾಗುತ್ತಿತ್ತು[43] ಎಂಬ ಅಂಶವನ್ನು ಪರಾಮರ್ಶನದಿಂದ ಪಡೆದು ಕೊಳ್ಳಲಾಗಿದೆ.

**7.9 ವ್ಯಾಪಾರ ವೃತ್ತಿ ಸಂಘಗಳು**

ವೃತ್ತಿ ಸಂಘಗಳಲ್ಲೆಲ್ಲಾ ಅತ್ಯಂತ ಪ್ರಭಾವಶಾಲಿಯಾಗಿದ್ದ ವ್ಯಾಪಾರಿ ಸಂಘಗಳು ಕರ್ನಾಟಕದಲ್ಲಿ 7–8ನೇ ಶತಮಾನದಿಂದ ಅಂದರೆ ಬಾದಾಮಿ ಚಾಲುಕ್ಯರ ಕಾಲದಿಂದ ಉನ್ನತಿಗೆ ಬಂದಂತೆ ತಿಳಿಯುತ್ತದೆ. "ಕರ್ನಾಟಕ ಸಾಮ್ರಾಜ್ಯ" ಕಾಲದೊಂದಿಗೆ ಸಮೀಕೃತವಾದ 'ಅಯ್ಯಾವೊಳೆ ಐನೂರ್ವ'ರೆಂಬ ವಣಿಕ ಸಂಘ ವಿಜಯನಗರ ಕಾಲದವರೆಗೂ ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಅದರ ಮಹತ್ವ ಮತ್ತು ಕ್ರಿಯಾಶೀಲತೆಗೆ ಸಾಕ್ಷಿಯಾಗಿದೆ. ಅದು ಇಡೀ ಭಾರತ ಹಾಗೂ ಹೊರದೇಶಗಳಲ್ಲಿ ವಾಣಿಜ್ಯ ವ್ಯವಹಾರಗಳನ್ನು ನಡೆಸುತ್ತಿದ್ದ ಸಂಗತಿಯಿಂದ ನಾವು ಆಗಿನ ಕರ್ನಾಟಕದ ರಾಜಕೀಯ ಮತ್ತು ಆರ್ಥಿಕ ಅಭಿವೃದ್ಧಿಯನ್ನು ತಿಳಿಯಬಹುದು.

ಕರ್ನಾಟಕವನ್ನು ಕೇಂದ್ರವಾಗಿಟ್ಟುಕೊಂಡಿದ್ದ ಅಯ್ಯಾವೊಳೆ ಐನೂರ್ವರ ಸಂಘದ ಕಾರ್ಯ ಚಟುವಟಿಕೆಗಳನ್ನು ಕುರಿತು ಕರ್ನಾಟಕ ವಿಶ್ವಕೋಶದಲ್ಲಿ ನೀಡಿರುವ ವಿವರ ಈ ಕೆಳಕಂಡಂತಿದೆ.

ಇದು ಪ್ರಾರಂಭತಃ ಅಯ್ಯೊವೊಳೆಯಲ್ಲಿ ಈಗಿನ ಐಹೊಳೆ ಬಾದಾಮಿ ಚಾಲುಕ್ಯರ ಆಡಳಿತ ಕಾಲದಲ್ಲಿ ಸ್ಥಾಪನೆಯಾಗಿರಬೇಕೆಂದು ಊಹಿಸಲಾಗಿದೆ. ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳ ಸಾಮ್ರಾಜ್ಯಗಳ ಕಾಲದ ಅನೇಕ ಶಾಸನಗಳಲ್ಲಿ ಅಯ್ಯಾವೊಳೆ ಐನೂರ್ವ ಸಂಘಕ್ಕೆ ಸಂಬಂಧಿಸಿದ ಮಾಹಿತಿ ದೊರೆಯುತ್ತದೆ. ಕನ್ನಡನಾಡಿನ ಪ್ರಸಿದ್ಧ ವಣಿಕರ ಜೊತೆಗೆ ತಮಿಳುನಾಡು ಮತ್ತು ಕೇರಳದ ವರ್ತಕರು ಈ ಸಂಘದ ಸದಸ್ಯತ್ವ ಹೊಂದಿದ್ದರು. ಎಂಟನಾಡ ಹದಿನರ್ವರು,

ಗವರುಗಳು, ಗಾತ್ರಿಗಳು, ಶೆಟ್ಟಿಯವರು, ಶೆಟ್ಟಿಗುತ್ತರು, ಅಂಕಕಾರರು, ಬೀರರು, ಬೀರವಣಿಗರು, ಗಾವುಂಡರು ಇವರೆಲ್ಲ ಈ ಸಂಘದ ಸದಸ್ಯರಾಗಿದ್ದರು. ಇವರು ಹಸುಂಬೆಯಲ್ಲಿ ಅಮೂಲ್ಯ ವಸುತಗಳನ್ನು ತುಂಬಿಕೊಂಡು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪಟ್ಟಣಗಳಲ್ಲಿ ಸಂಚರಿಸಿ ಸರಕುಗಳನ್ನು ಕೊಳ್ಳುವ ಮತ್ತು ಮಾರುವ ಕಾರ್ಯದಲ್ಲಿ ತೊಡಗಿದ್ದರು. ಪಾದಮಾರ್ಗ, ಜಲಮಾರ್ಗವಾಗಿ ಕುದುರೆ, ಎತ್ತು, ಕತ್ತೆ, ಕೋಣ, ಒಂಟೆ, ಆನೆಗಳನ್ನು ಉಪಯೋಗಿಸುತ್ತಿದ್ದರು. ದ್ವಿಪಾಂತರಗಳಿಗೆ ಹಡಗುಗಳ ಮೂಲಕ ಹೋಗಿ ಬರುತ್ತಿದ್ದರು. ಈ ವರ್ತಕರು ಬಟ್ಟೆ, ಭತ್ತ, ಹತ್ತಿ, ಸಕ್ಕರೆ, ಗೋಧಿ, ಅಡಿಕೆ, ಸಾಸುವೆ, ಜೀರಿಗೆ, ಮೆಣಸು, ಅರಿಶಿನ, ಇಂದ್ರನೀಲ, ಚಂದ್ರಕಾಂತ ಮತ್ತು ವಜ್ರ ವೈಡೂರ್ಯ, ಪದ್ಮ, ರಾಳ, ಹವಳ, ಚಂದನ, ಕಸ್ತೂರಿ, ಕುಂಕುಮ ಮೊದಲಾದ ವಸ್ತುಗಳನ್ನು ಅವು ದೊರೆಯುವ ಪ್ರದೇಶಗಳಲ್ಲಿ ಕೊಂಡು ಅವಶ್ಯಕತೆಯಿದ್ದ ಪ್ರದೇಶಗಳಿಗೆ ಸಾಗಿಸಿ ಮಾರುತ್ತಿದ್ದರು. ಅನೇಕ ಪಟ್ಟಣಗಳಲ್ಲಿ ಈ ಸಂಘದ ವರ್ತಕರು ದೇವಾಲಯಗಳು ಅನ್ನ ಛತ್ರಗಳು ಮತ್ತು ಕೆರೆಗಳನ್ನು ಕಟ್ಟಿಸಿರುವರಲ್ಲದೆ ದೇವಾಲಯಗಳಿಗೂ ಮಠಗಳಿಗೂ ಉದಾರವಾಗಿ ದಾನದತ್ತಿಗಳನ್ನು ನೀಡಿರುವರು.[44]

ಈ ವಿವರಣೆಯು ಐನೂರ್ವರ ಸಂಘದ ಚಟುವಟಿಕೆಗಳ ಬಗ್ಗೆ ಮತ್ತು ಅವರು ವ್ಯಾಪಾರ ನಡೆಸುತ್ತಿದ್ದ ದೇಶಗಳ ಬಗ್ಗೆ ಹಾಗೂ ಸರಕುಗಳ ಬಗ್ಗೆ ಸಂಕ್ಷಿಪ್ತ ಚಿತ್ರ ನೀಡುತ್ತದೆ.

ಈ ಮೇಲಿನ ಬಹುತೇಕ ಸಂಗತಿಗಳು ಕ್ರಿ.ಶ. 1150 ರ ಬಳ್ಳಿಗಾವೆ ಶಾಸನದಲ್ಲಿ[45] ಅಡಕವಾಗಿದೆ. ಶಿಕಾರಿಪುರ ತಾಲ್ಲೋಕಿನ ಬಳ್ಳಿಗಾವೆ ಅಥವಾ ಬಳ್ಳಿಗಾವಿ ಇತಿಹಾಸ ಪ್ರಸಿದ್ಧ ಸ್ಥಳವಾಗಿದೆ. ಅದು ಬಾದಾಮಿ ಚಾಲುಕ್ಯರ ಕಾಲದಿಂದ ಕಲ್ಯಾಣದ ಚಾಲುಕ್ಯರ ಕಾಲದವರೆಗೂ ಅಂದರೆ ನಾಲ್ಕೈದು ಶತಮಾನಗಳ ಕಾಲ ವಾಣಿಜ್ಯ ಹಾಗೂ ರಾಜಕೀಯ ಕೇಂದ್ರವಾಗಿತ್ತು. ಐಹೊಳೆಯಲ್ಲೂ ರಚಿತವಾದ ಐನೂರ್ವರು ಸಂಘದ ಕೇಂದ್ರಸ್ಥಳ ತರುವಾಯ ಇಲ್ಲಿಗೆ ಬದಲಾಯಿಸಿತು. ಈ ವರ್ತಕ ಸಂಘಕ್ಕೆ ಐನೂರ್ವರು ಎಂಬ ಹೆಸರು ಬರಲು ಕಾರಣವೇನೆಂದು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಐನೂರ್ವರು ಅಥವಾ ಐದುನೂರು ಸಂಖ್ಯೆ ಆ ಸಂಘದ ಮೂಲ ಸದಸ್ಯ ಸಂಖ್ಯೆ ಇರಬಹುದೆಂದು ಡಾ.ಪಿ.ಬಿ.ದೇಸಾಯಿಯವರು ಅಭಿಪ್ರಾಯಪಟ್ಟರೆ[46] ಇನ್ನು ಕೆಲವರು ಆ ಸಂಘದ ಕಾರ್ಯನಿರ್ವಾಹಕ ಸದಸ್ಯರ ಸಂಖ್ಯೆ ಇದ್ದಿರಬಹುದೆಂದು ಭಾವಿಸಿದ್ದಾರೆ.

ಈ ಐನೂರ್ವರ ಸಂಘದ ಸದಸ್ಯರು ಅತ್ಯಂತ ಪ್ರಭಾವಿಗಳಾಗಿದ್ದರು. ಅವರ ಸಂಘದ ಶಾಖೆಗಳು ಈಗಿನ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡುಗಳಲ್ಲದೆ ಆಗ್ನೇಯ ಏಷ್ಯಾದಲ್ಲೂ ಇದ್ದಂತೆ ತೋರುತ್ತದೆ.[47]

ಅವರ ಪ್ರಸ್ತಾಪವಿರುವ ತಮಿಳು ಶಾಸನವೊಂದು ಸುಮಾತ್ರದಲ್ಲಿ ದೊರೆತಿದೆ. ಈ ಸಂಘದ ಪ್ರಮುಖ ವರ್ತಕರು ರಾಜರಿಗೆ ಆಪ್ತರಾಗಿದ್ದರು ಹಾಗೂ ಪಟ್ಟಣಗಳ ಆಡಳಿತದಲ್ಲಿ ಪಾಲ್ಗೊಳ್ಳುತ್ತಿದ್ದರು.

### 7.10 ವಾಣಿಜ್ಯ ಮತ್ತು ವ್ಯಾಪಾರ

ರಾಜ್ಯಕ್ಕೆ ಆದಾಯದ ಮೂಲವು ವ್ಯಾಪಾರದಿಂದ ದೊರಕುತ್ತಿತ್ತು. ಕೊಳ್ಳುವ ಮತ್ತು ಮಾರುವ ಸರಕುಗಳ ಮೇಲೆ ಹಲವು ಬಗೆಯ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು ಎಂದು ಶಾಸನಗಳಲ್ಲಿ ಹೇಳಲಾಗಿದೆ. ವಿವಿಧ ಭಾಗಗಳಿಂದ ಸರಕುಗಳು ತಲಕಾಡಿಗೆ ಮಾರಾಟಕ್ಕೋಸ್ಕರ ಬರುತ್ತಿದ್ದವು. ಇಂಥ ಸರಕಿನ ಮೇಲೆ ಟೋಲ್ ಸುಂಕದ ಕಟ್ಟೆಗಳು ತೆರಿಗೆಯನ್ನು ಸಂಗ್ರಹಿಸುತ್ತಿದ್ದವು. ಈ ಮೇಲೆ ತಿಳಿಸಿದ ಸರಕಲ್ಲದೆ ಆಹಾರ ಧಾನ್ಯಗಳು, ಬೆಲೆಬಾಳುವ ಮುತ್ತುಗಳು, ಮಾಣಿಕ್ಯಗಳು ವ್ಯಾಪಾರಕ್ಕಾಗಿ ಮಾರುಕಟ್ಟೆಗೆ ಬರುತ್ತಿದ್ದವು.

ಹೊಯ್ಸಳರ ಅರಸರು ನೆರೆಹೊರೆಯ ರಾಜ್ಯಗಳ ಜೊತೆ ವ್ಯಾಪಾರ ಸಂಪರ್ಕ ಹೊಂದಿದ್ದರು. ಬೆಲೆಬಾಳುವ ಕಲ್ಲು, ರತ್ನಗಳ ಗುಣಲಕ್ಷಣಗಳನ್ನು ಕಂಡುಹಿಡಿಯುವ ಸಾಮರ್ಥ್ಯವನ್ನು ಹೊಂದಿರುವ ನುರಿತ ವ್ಯಕ್ತಿಗಳಿದ್ದರು. ಇಂತಹ ರತ್ನಗಳು ಉತ್ತಮ ಭವಿಷ್ಯವನ್ನು ಕೊಡುತ್ತವೆ ಎಂಬ ನಂಬಿಕೆಯನ್ನು ಹೊಂದಿದ್ದರು. ಆಯಾ ಜಾತಿಗೆ ಸೇರಿದ ಕಲ್ಲುಗಳು ತಮ್ಮದೇ ಆದ ಫಲವನ್ನು ಕೊಡುತ್ತವೆ ಎಂದು ತಿಳಿದುಕೊಳ್ಳುವ ಸಾಮರ್ಥ್ಯವನ್ನು ಕೆಲವು ವ್ಯಕ್ತಿಗಳು ತಿಳಿದುಕೊಂಡಿದ್ದರು. ಇಂಥ ಕಾಯಕಕ್ಕೆ ಮಲಯೊಳದ ಕುಂಜ ನಂಬಿಶೆಟ್ಟಿ ಎಂಬ ಪ್ರವರ್ತಕರು ಹೆಸರುವಾಸಿಯಾಗಿದ್ದರು.[48]

ವ್ಯಾಪಾರಿ ಸಂಘಗಳು ವ್ಯಾಪಾರವನ್ನು ನಿಯಂತ್ರಿಸುತ್ತಿದ್ದವು ಪಟ್ಟಣಸ್ವಾಮಿ ಸಂಘದ ಅಧ್ಯಕ್ಷನಾಗಿದ್ದನು. ವ್ಯಾಪಾರಿ ಸಂಘದ ಅಧ್ಯಕ್ಷರ ಕಾರ್ಯಗಳು ಗ್ರಾಮದ ಮುಖ್ಯಸ್ಥನ ಅಥವಾ

ಗಾವುಂಡನ ಕಾರ್ಯಗಳನ್ನು ಹೋಲುತ್ತಿದ್ದವು. ವ್ಯಾಪಾರಿ ಸಂಘದ ಅಧ್ಯಕ್ಷರಿಗೆ ಅನುದಾನವನ್ನು ಬಿಡುಗಡೆ ಮಾಡುವ ಕೆಲಸವನ್ನು ನಿರ್ವಹಿಸುತ್ತಿದ್ದರು.[49]

ವಿವಿಧ ಬಗೆಯ ವಸ್ತುಗಳನ್ನು ವ್ಯಾಪಾರಸ್ಥರು ವ್ಯಾಪಾರಕ್ಕಾಗಿ ಉಪಯೋಗಿಸುತ್ತಿದ್ದರು. ಸಾಮಾನ್ಯವಾಗಿ ಬೆಲೆ ಬಾಳುವ ರತ್ನಗಳನ್ನು ಪರೀಕ್ಷಿಸಿ ಸಲಹೆಗಳನ್ನು ಕೊಡುವ ಸಾಮರ್ಥ್ಯವನ್ನು ಹೊಂದಿದ್ದರು. ಗಣ್ಯವ್ಯಕ್ತಿಗಳು ಇವರ ಹತ್ತಿರ ಒಂದು ಸಲಹೆಗಳನ್ನು ಪಡೆದುಕೊಳ್ಳುತ್ತಿದ್ದರು. ರತ್ನಗಳ ವ್ಯಾಪಾರದಲ್ಲಿ ಕುಂಜೆ ಶೆಟ್ಟಿ ಬಹಳ ಹಿರಿಯರಾಗಿದ್ದರು.[50]

ಮಲಯಾಳದ ನಾನಾ ದೇಶಗಳಲ್ಲಿ ಪರಮೇಶ್ವರ ನಾಯಕರು ಅತಿ ದೊಡ್ಡ ವ್ಯಾಪಾರಿ ಯಾಗಿದ್ದರು. ಈ ಅವಧಿಯ ವ್ಯಾಪಾರಸ್ಥರು ಉದಾರತೆಗೆ ಹೆಸರುವಾಸಿಯಾಗಿದ್ದರು. ದೇವಾಲಯ ಗಳನ್ನು ಕಟ್ಟಿಸುವುದು, ನೀರಿನ ತೊಂಬೆಗಳನ್ನು ನಿರ್ಮಿಸುವುದು ಇವೇ ಮುಂತಾದ ಜನಪರ ಕಾರ್ಯಗಳನ್ನು ಇವರು ನಿರ್ವಹಿಸುತ್ತಿದ್ದರು. ವೀರಬಣಜ ಹಲವು ಬಗೆಯ ವಸ್ತುಗಳ ವ್ಯಾಪಾರದಲ್ಲಿ ನಿರ್ದಿಷ್ಟ ಸರಕುಗಳ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದನು.[51] ಇದರಿಂದ ಬರುವ ಆದಾಯವನ್ನು ಸೇವೆಗೆ ಬಳಸಲಾಗುತ್ತಿತ್ತು.

ವೈಶ್ಯ, ವಣಿಯ, ನಗರತ್ತಾರ್ ಇವೇ ಮುಂತಾದ ಸಂಘಗಳು ದೇವಾಲಯಕ್ಕೆ ಉಡುಗೊರೆ ನೀಡುವ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಬಟ್ಟೆಗಳು, ಮೆಣಸು, ನೂಲುಗಾರ, ಅಡಿಕೆ, ಲವಣ, ದವಸಧಾನ್ಯಗಳು ಹಾಗೂ ಕುದುರೆ ಇವುಗಳ ವಹಿವಾಟಿನಿಂದ ಒಂದು ನಿರ್ದಿಷ್ಟವಾದ ಆದಾಯ ಬರುತ್ತಿತ್ತು.

ವರ್ತಕರು ದಾನಧರ್ಮ ಕಾಯಗಳನ್ನು ಕೈಗೊಳ್ಳುತ್ತಿದ್ದರಿಂದ ನಾವು ಅವರ ದಾನಶೀಲತೆ ಹೇಗಿತ್ತೆಂದು ತಿಳಿಯಬಹುದಾಗಿದೆ. ಜನರ ಯೋಗಕ್ಷೇಮಕ್ಕೆ ಸಂಪತ್ತು ಮತ್ತು ಇತರೆ ದಾನಗಳನ್ನು ಮಾಡುತ್ತಿದ್ದರು. ಇದರಿಂದ ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರ ಈ ಕಾಲದಲ್ಲಿ ಸಂಪತ್ಭರಿತ ವಾಗಿತ್ತೆಂದು ತಿಳಿದುಬರುತ್ತದೆ. ವರ್ತಕರು ತಮ್ಮದೇ ಆದ ನೀತಿಯನ್ನು ಅನುಸರಿಸುತ್ತಿದ್ದರು. ಇದನ್ನು ವೀರ, ಬಂಜ, ಧರ್ಮ, ವಾಣಿಜ್ಯ ನೀತಿ ಎಂದು ಕರೆಯಲಾಗಿತ್ತು. ವರ್ತಕರಿಗೆ ಲಾಭ ಗಳಿಸುವುದು ಮಾತ್ರವಲ್ಲದೆ, ಜನರ ಕಲ್ಯಾಣವನ್ನು ಕಾಪಾಡುವುದು ಮುಖ್ಯ ಗುರಿಯಾಗಿತ್ತು.

ವರ್ತಕರು ಸಮಾಜ ಸೇವಾ ಕಾರ್ಯಗಳನ್ನು ಕೈಗೊಂಡಿದ್ದರು. ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುವುದು, ದೇವಾಲಯಗಳನ್ನು ನಿರ್ಮಿಸುವುದು, ನೀರಿನ ತೊಂಬೆಗಳನ್ನು ನಿರ್ಮಿಸುವುದು, ಬಡವರಿಗೆ ಅನ್ನದಾನ ಮಾಡುವುದು ಇವೇ ಮೊದಲಾದ ಜನ ಕಲ್ಯಾಣ ಕಾರ್ಯಗಳನ್ನು ಕೈಗೊಂಡಿದ್ದರು.

### 7.11 ಸಂತೆಗಳು ಮತ್ತು ಜಾತ್ರೆಗಳು

ಸಂತೆಗಳು ಮತ್ತು ಜಾತ್ರೆಗಳು ಪಟ್ಟಣಗಳ ಬೆಳವಣಿಗೆಗೆ ಕಾರಣವಾಯಿತು. ಮಾರುವವರು ಮತ್ತು ಕೊಳ್ಳುವವರು ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ಗೊತ್ತಾದ ವೇಳೆಯಲ್ಲಿ ಸೇರುವುದಕ್ಕೆ ಸಂತೆ ಎನ್ನಬಹುದು. ಹೀಗೆ ಸಂತೆ ಒಂದು ಮುಖ್ಯ ವ್ಯಾಪಾರ ಕೇಂದ್ರವಾಗಿತ್ತು. ಸಂತೆ ನಡೆಯುತ್ತಿದ್ದ ಪಟ್ಟಣಗಳಲ್ಲಿ ವ್ಯಾಪಾರಿಗಳಿಗೆ ಮತ್ತು ಇತರೆ ಸಂದರ್ಶಕರಿಗೆ ಒಳ್ಳೆಯ ರಸ್ತೆಗಳು ಮತ್ತು ನೀರು ಮುಂತಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿತ್ತು. ಸ್ಥಳೀಯ ವರ್ತಕರು ಮತ್ತು ಅವರ ಅಧ್ಯಕ್ಷ ಸಂತೆಯನ್ನು ನಡೆಸುತ್ತಿದ್ದರು. ಅಧ್ಯಕ್ಷನು ಪೌರಸಭಾಧ್ಯಕ್ಷನೂ ಆಗಿದ್ದನು. ಸಂತೆಗೆ ತಗಲುವ ವೆಚ್ಚವನ್ನು ದಾಸ್ತಾನುಗಳನ್ನು ಮಾರಿದಾಗ ಅಥವಾ ಕೊಂಡಾಗ ವಸೂಲು ಮಾಡುತ್ತಿದ್ದ ಸುಂಕಗಳಿಂದ ನಡೆಸಲಾಗುತ್ತಿತ್ತು. ಈ ಸುಂಕವನ್ನು ನಗದು ಅಥವಾ ಸರಕುಗಳ ರೂಪದಿಂದ ವಸೂಲು ಮಾಡಲಾಗುತ್ತಿದ್ದಿತು. ಸಂತೆಯನ್ನು ನಡೆಸುವುದಕ್ಕೆ ರೈತರು ಮತ್ತು ವರ್ತಕರು ಒಂದಾಗಿ ಅಧ್ಯಕ್ಷನಿಗೆ ಭೂಮಿ ಮತ್ತು ಹಲವು ತೆರಿಗೆಗಳನ್ನು ಕೊಡುತ್ತಿದ್ದರು. ಅನೇಕ ವೇಳೆ ಸಂತೆಯನ್ನು ಸ್ಥಾಪಿಸಲು ಶ್ರೇಣಿಯ ಅಧ್ಯಕ್ಷನಿಗೆ ಭೂಮಿಯನ್ನು ಕೊಡಲಾಗುತ್ತಿತ್ತು. ಸಂತೆ ನಡೆಯುವ ಸ್ಥಳವನ್ನು ಪೇಟೆ, ಸಂತೆ ಅಥವಾ ಸಂತೆಪೇಟೆ ಎಂದು ಕರೆಯುತ್ತಿದ್ದರು. ನಾಡಗೌಡ ಅಥವಾ ಮಹಾ ಮಂಡಲೇಶ್ವರ ಅಥವಾ ಒಬ್ಬ ಮಂತ್ರಿಯ ಆಜ್ಞೆಯ ಮೇರೆಗೆ ಸಂತೆಗಳನ್ನು ಪ್ರಾರಂಭಿಸಲಾಗುತ್ತಿತ್ತು ಅಥವಾ ರದ್ದುಗೊಳಿಸಲಾಗುತ್ತಿತ್ತು.

ಪ್ರತಿಯೊಂದು ನಗರ ಮತ್ತು ಪಟ್ಟಣಗಳಲ್ಲಿ ಹಲವಾರು ಅಂಗಡಿಗಳು ಕಂಡುಬರುತ್ತಿತ್ತು. ಅಂಗಡಿಗಳ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು.[52] ವಾರಕ್ಕೊಮ್ಮೆ ಸಂತೆಗಳು ನಡೆಯುತ್ತಿದ್ದವು. ಸುತ್ತಮುತ್ತಲಿನ ಪ್ರದೇಶಗಳಿಂದ ತಂದ ವಸ್ತುಗಳನ್ನು ಕೊಳ್ಳುವ ಮತ್ತು ಮಾರುವ ವ್ಯವಹಾರಗಳು ನಡೆಯುತ್ತಿದ್ದವು. ನಗದು ಮಾರಾಟದಲ್ಲಿ ಯಾವುದೇ ತೆರಿಗೆಯನ್ನು ವಿಧಿಸುತ್ತಿರಲಿಲ್ಲ. ಸಂತೆಯಲ್ಲಿ ವ್ಯವಹರಿಸುವುದು ಸುಲಭವಾಗಿತ್ತು ಸಂತೆಗಳನ್ನು ನಡೆಸಲು ಸರ್ಕಾರದಿಂದ ಹಣವನ್ನು ಬಿಡುಗಡೆ

ಮಾಡಲಾಗುತ್ತಿತ್ತು. ವ್ಯಾಪಾರಿಗಳಿಗೆ ಸಂತೆಯ ಖರ್ಚು ಬೀಳುತ್ತಿರಲಿಲ್ಲ ಸಂತೆಯಲ್ಲಿ ಯಾವುದೇ ಮೋಸ ನಡೆದರೆ ಅವರಿಗೆ ಶಿಕ್ಷೆ ವಿಧಿಸಲಾಗುತ್ತಿತ್ತು.

ಕ್ರಿ.ಶ. 1274ರ ದಾಖಲೆಗಳ ಪ್ರಕಾರ ಪ್ರತಿ ಮಂಗಳವಾರ ಸಂತೆ ನಡೆಯುತ್ತಿತ್ತು. ಮೂರನೇ ನರಸಿಂಹನು ಸಂತೆಯಲ್ಲಿ ವೇಶ್ಯಾವಾಟಿಕೆ ನಡೆಸಲು ಸಹಕರಿಸಿದ್ದರಿಂದ ಸಂತೆ ನಡೆಸುತ್ತಿದ್ದ ಅಧಿಕಾರಿಗಳನ್ನು ಸೇವೆಯಿಂದ ವಜಾಗೊಳಿಸಿದನು. ಸಂತೆಯಲ್ಲಿ ಸಾದೆ, ಕಾಳು, ಆಭರಣಗಳು, ಬಟ್ಟೆಗಳು ಇವೇ ಮುಂತಾದ ಸರಕುಗಳನ್ನು ಮಾರಾಟ ಮಾಡುತ್ತಿದ್ದರು.

ಸಂತೆಗಳು ಹೆಚ್ಚಾಗಿ ಮುಖ್ಯ ಗ್ರಾಮಗಳಲ್ಲಿ ನಡೆಯುತ್ತಿದ್ದವು. ಸಂತೆಗಳು ಇಂದಿಗೂ ನಡೆಯುವುದನ್ನು ನಾವು ಕಾಣಬಹುದಾಗಿದೆ. ಪಟ್ಟಣಸ್ವಾಮಿ ರಾಜ ಮನೆತನದವರೊಂದಿಗೆ ಸೇರಿ ಸಂತೆಗಳನ್ನು ನಡೆಸುತ್ತಿದ್ದರು.[53]

ಸಂತೆಗಳು ಕೊಳ್ಳುವವರು ಮತ್ತುಮಾರುವವರು ವ್ಯಾಪಾರದಲ್ಲಿ ಒಪ್ಪಂದಗಳನ್ನು ಮಾಡಿಕೊಳ್ಳಲು ಸಹಕಾರಿಯಾಗಿತ್ತು. ಸಂತೆಗಳು ನಡೆಯುತ್ತಿದ್ದ ಕೆಲವು ಗ್ರಾಮಗಳು ಪಟ್ಟಣಗಳಾಗಿ ಕಾಲಕ್ರಮೇಣ ಪರಿವರ್ತನೆಗೊಂಡವು. ಮೂಗೂರಿನ ಪ್ರಭು (ಟಿ.ನರಸೀಪುರ ತಾಲ್ಲೋಕು) ಮತ್ತು ಗಾವುಂಡರು ಗ್ರಾಮವನ್ನು ಪಟ್ಟಣವಾಗಿ ಪರಿವರ್ತನೆ ಮಾಡಿದರು ಮತ್ತು ಸಂತೆಗಳನ್ನು ನಡೆಸಲು ತೀರ್ಮಾನವನ್ನು ತೆಗೆದುಕೊಂಡರು.[54]

## 7.12 ಮಾರಾಟದ ಸರಕುಗಳು

ಹೊಯ್ಸಳರ ಕಾಲದ ಸಂತೆಪೇಟೆ ಪಟ್ಟಣಗಳಲ್ಲಿರುತ್ತಿದ್ದ ಸರಕುಗಳ ವಿವರಗಳನ್ನು ಹೀಗೆ ಕೊಡಬಹುದು. ಭತ್ತ, ಜೋಳ, ಅಕ್ಕಿ, ಎಳ್ಳು, ಅವರೆ, ಕಡಲೆ, ತೊಗರಿ, ಗೋಧಿ, ಉದ್ದು, ಜೀರಿಗೆ, ಸಾಸಿವೆ, ಮೆಣಸು, ಏಲಕ್ಕಿ, ಕೊತ್ತಂಬರಿ, ಈರುಳ್ಳಿ, ಹತ್ತಿ, ಹಂಜಿ, ನೂಲು, ಸೀರೆ, ಪಟ್ಟ, ಪಳಿವಟ್ಟ, ಪಟ್ಟಸೂತ್ರ, ಬಟ್ಟೆ, ಸೆಣಬು, ವೀಳ್ಯದೆಲೆ[55], ಅಡಿಕೆ[56], ಸುಣ್ಣ, ಭದ್ರ ಹಸ್ತಿ, ಇಂದ್ರನೀಲ, ಚಂದ್ರಕಾಂತ ಹವಳ, ಪಟ್ಟೆ, ಚಿನ್ನ, ತವರು ಬೆಲ್ಲ[57], ಸಕ್ಕರೆ, ಉಪ್ಪು, ಎಣ್ಣೆ, ತುಪ್ಪ, ಲವಂಗ, ಅರಗು, ಚಂದನ, ಕುಂಕುಮ, ಕರ್ಪೂರ, ಕಸ್ತೂರಿ, ಓಲೆ, ಕಾಯಿಪಲ್ಲೆ, ಬಾಳೆಹಣ್ಣು, ತೆಂಗಿನಕಾಯಿ, ನೆಲ್ಲಿಕಾಯಿ,

ಹೂವು, ಹೂಮಾಲೆ, ಕಬ್ಬು, ಶಂಖ, ಕುದುರೆ, ಎತ್ತು, ಆನೆ, ನಾರು ಬೇರು, ಪಾದರಕ್ಷೆ, ಮಿಣಿ, ಗಡಿಗೆ, ಹುಲ್ಲು ಇತ್ಯಾದಿ.

ಇವುಗಳಲ್ಲಿ ಸಾಂಬಾರವಸ್ತು, ದವಸಧಾನ್ಯ, ಹತ್ತಿ, ಸೀರೆ, ವೀಳ್ಯದೆಲೆ ಅಡಿಕೆ, ಎಣ್ಣೆ, ಬೆಲ್ಲ, ಉಪ್ಪು, ಸಕ್ಕರೆ, ಕಾಯಿಪಲ್ಯಗಳ ಬಳಕೆ ಅಧಿಕವಾಗಿತ್ತು. ಈ ವಸ್ತುಗಳಲ್ಲಿ ಹೆಚ್ಚಿನವು ಹೊಯ್ಸಳ ಸಾಮ್ರಾಜ್ಯದಲ್ಲೇ ಬೆಳೆಯುತ್ತಿದ್ದವು. ಆದರೆ ಕೆಲವು ಮಾತ್ರ ನೆರೆನಾಡಿನಿಂದ ವಿವಿಧ ಪೇಟೆ ಪಟ್ಟಣ ಸಂತೆಗಳಿಗೆ ಬರುತ್ತಿದ್ದವು.

### 7.13 ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರವಾಗಿ ತಲಕಾಡು

ಅನೇಕ ಪಟ್ಟಣಗಳು ದೇವಸ್ಥಾನದ ಸುತ್ತಮುತ್ತ ಹುಟ್ಟಿ ಬೆಳೆದದ್ದುಂಟು. ಇದು ಬಹು ಸಹಜವಾಗಿತ್ತು. ಹೊಯ್ಸಳರ ಕಾಲದ ಧಾರ್ಮಿಕ ಸಂಸ್ಥೆಗಳು ವಿಶೇಷವಾಗಿ ದೇವಾಲಯ ಗಳಾಗಿದ್ದವು. ಅವು ಆಯಾ ಪ್ರದೇಶದಲ್ಲಿ ಕೆಲಸ ಒದಗಿಸಿದವು. ದೇವಾಲಯದ ಉದ್ಯೋಗ ನಿರ್ಮಾಣ ಶಕ್ತಿಯು ಅನುದಾನದಿಂದ ಸಂಗ್ರಹಿಸಿದ ಸಂಪತ್ತನ್ನು ಅವಲಂಬಿಸಿದ್ದಿತು. ಒಂದು ದೇವಸ್ಥಾನವಿದ್ದರೆ ಅದರ ಸಮೀಪದಲ್ಲಿಯೇ ಅರ್ಚಕರು ಮತ್ತು ಅದಕ್ಕೆ ಸಂಬಂಧಿಸಿದ ಇತರರು ವಾಸಿಸಬೇಕು, ಆ ದೇವಸ್ಥಾನಕ್ಕೆ ಬರುವ ಭಕ್ತರ ಸೌಕರ್ಯಕ್ಕಾಗಿ ತಂಗುದಾಣಗಳು ಮತ್ತು ಅಂಗಡಿಗಳು ಸ್ಥಾಪನೆಯಾದವು. ದೇವಾಲಯಗಳು ರಾಜರು ಕೊಟ್ಟ ದಾನ ಹಾಗೂ ಅವರಿಂದ ಪ್ರಚೋದಿತರಾಗಿ ಇತರರು ನೀಡಿದ ದಾನಗಳ ನೆರವಿನಿಂದ ಒಂದು ಸಾಮಾಜಿಕ, ಆರ್ಥಿಕ ಪರಿವರ್ತನೆಯನ್ನು ಉಂಟುಮಾಡಿದವು. ಅವು ಕುಶಲಕರ್ಮಿಗಳು, ಗಾಯಕರು, ಅಡಿಗೆಯವರು ಹಲವು ಬಗೆಯ ಸೇವಕರು, ಅರ್ಚಕರು, ಲೆಕ್ಕಿಗರು ನಿರ್ವಾಹಕರು ಮತ್ತು ಗುಮಾಸ್ತರು ಮೊದಲಾದವರನ್ನು ನೇಮಿಸಿಕೊಳ್ಳುತ್ತಿದ್ದವು. ಈ ದೇವಾಲಯ ಸಿಬ್ಬಂದಿಗೆ ವೇತನವನ್ನು ಭೂಮಿಯ ರೂಪದಲ್ಲಿ ಅಥವಾ ಹಣದ ರೂಪದಲ್ಲಿ ಕೊಡಲಾಗುತ್ತಿತ್ತು. ಅಲ್ಲದೆ ಹೊಯ್ಸಳ ದೇವಾಲಯ ಸಂಕೀರ್ಣಗಳು ಅಕ್ಕಿ, ಧಾನ್ಯಗಳು, ಎಣ್ಣೆ, ತುಪ್ಪ, ಬೆಲ್ಲ, ಸಕ್ಕರೆ, ಸಾಂಬಾರ ಪದಾರ್ಥಗಳು, ಹಾಲು, ಮೊಸರು, ಬೆಣ್ಣೆ, ಹೂವುಗಳು, ತರಕಾರಿಗಳು, ಹಣ್ಣುಗಳು, ತೆಂಗಿನಕಾಯಿ, ಅಗರಬತ್ತಿ, ಬಟ್ಟೆಗಳು ಇತ್ಯಾದಿ ವಸ್ತುಗಳಿಗೆ ಸ್ಥಳೀಯ ಬೇಡಿಕೆಯನ್ನು ಸೃಷ್ಟಿಸಿದವು. ದೇವಾಲಯದ ಆಚರಣೆಗಳು ಮತ್ತು ದೇವತಾ ಸೇವೆಗಳಿಗೆ ಈ ವಸ್ತುಗಳ ಅವಶ್ಯಕತೆಯಿದ್ದಿತು. ಹೀಗೆ ದೇವಾಲಯಗಳು ಉದ್ಯೋಗ ಗಳನ್ನು ನಿರ್ಮಿಸಿ ಸಮಾಜದ ಅನೇಕ ವರ್ಗಗಳಿಗೆ ಜೀವನೋಪಾಯವನ್ನು ಕಲ್ಪಿಸುತ್ತಿದ್ದಿತೆಂದು ಹೇಳಬಹುದು.

### 7.14 ಕೀರ್ತಿ ನಾರಾಯಣ ದೇವಾಲಯ

ಚೋಳರ ಅಧೀನದಲ್ಲಿದ್ದ ತಲಕಾಡನ್ನು ವಿಷ್ಣುವರ್ಧನನು ಕ್ರಿ.ಶ. 1116ರಲ್ಲಿ ಗೆದ್ದ ಮೇಲೆ ಕೀರ್ತಿ ನಾರಾಯಣ ದೇವಾಲಯವನ್ನು ಕಟ್ಟಿಸಿದನು. ಇದರ ಪ್ರತಿಷ್ಠಾಪನೆ ಡಿಸೆಂಬರ್ ಕ್ರಿ.ಶ. 1117 ರಲ್ಲಿ ನಡೆಯಿತೆಂದು ತಮಿಳು ಶಾಸನದಿಂದ ತಿಳಿದು ಬರುತ್ತದೆ. ಇದಕ್ಕೆ ಮುಂಚೆ ತಲಕಾಡಿನಲ್ಲಿ ರಾಜರಾಜೇಶ್ವರಿ ದೇವಾಲಯವಿದ್ದಿತೆಂದು ಕಂಡುಬರುವುದರಿಂದ ಈಗಿರುವ ವೈದ್ಯೇಶ್ವರವೇ ರಾಜ ರಾಜೇಶ್ವರವಾಗಿದ್ದಲ್ಲಿ ಬಹುಶಃ ಒಂದನೇಯ ರಾಜರಾಜ ಚೋಳನಿಂದ ನಿರ್ಮಿತವಾಗಿರಬಹುದು.[58]

ಕೀರ್ತಿ ನಾರಾಯಣ ದೇವಾಲಯವು ಶ್ರೀ ವೈದ್ಯೇಶ್ವರ ದೇವಾಲಯಕ್ಕೆ ನೇರ ಪಶ್ಚಿಮದಲ್ಲಿ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಮರಳು ದಿಬ್ಬದ ಮಧ್ಯೆ ಅಗೆದು ಬಿಡಿಸಲ್ಪಟ್ಟ ಗುಣಿಯಲ್ಲಿದೆ. ಪೂರ್ವಾಭಿಮುಖವಾದ ಈ ದೇವಾಲಯದ ಉತ್ತರಕ್ಕೆ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಮರುಳೇಶ್ವರ ದೇವಾಲಯವು ದಕ್ಷಿಣದ ಕಡೆ ಅಷ್ಟೇ ದೂರದಲ್ಲಿ ಪಾತಾಳೇಶ್ವರ ದೇವಾಲಯವು ಇವೆ. 'ನಡುಕೇರಿ ನಾರಾಯಣ' ನೆಂದು ಅನ್ವರ್ಥವಾಗಿ ಕರೆಯಲ್ಪಡುವ ಈ ದೇವಾಲಯವು ಈಗ ಮರಳಿನಿಂದ ಮುಚ್ಚಿ ಹೋಗಿರುವ ಹಿಂದಿನ ತಲಕಾಡು ನಗರದ ಮುಖ್ಯ ವಸತಿ ಭಾಗದ ಮಧ್ಯದಲ್ಲಿ ಕಟ್ಟಲ್ಪಟ್ಟದ್ದಿರಬೇಕು. ಇತರ ಪ್ರಸಿದ್ಧ ಹೊಯ್ಸಳ ದೇವಾಲಯಗಳಂತೆ ಬಳಪದ ಕಲ್ಲಿನಿಂದಾದ ಈ ಕಟ್ಟಡವು ಪೂರ್ತಿ ಕಲಾಶಿಲೆಯಿಂದಲೇ ನಿರ್ಮಿಸಿಲ್ಪಟ್ಟು ಬಳಪದ ಕಲ್ಲಿನ ಬಳಕೆಯು ನವರಂಗದ ಮಧ್ಯೆದ ನಾಲ್ಕು ಕಡೆಯ ಕಂಬಗಳ ಮತ್ತು ಶ್ರೀ ಕೀರ್ತಿ ನಾರಾಯಣ ಮೂಲ ಆಚಾರ್ಯಮೂರ್ತಿಗೆ ಮಾತ್ರ ಸೀಮಿತವಾಗಿದೆ. ದ್ರಾವಿಡ ಶೈಲಿಯ ವಿಮಾನ ಗೋಪುರವು ಇಟ್ಟಿಗೆ, ಗಾರೆಗಳಿಂದ ಕಟ್ಟಲ್ಪಟ್ಟಿದ್ದು ಬಹಳ ಶಿಥಿಲವಾಗಿತ್ತು. ಈಚೆಗೆ ಅದರ ಪೂರ್ಣ ದುರಸ್ತಿಯಾಗಿದೆ. ಆಲಯದ ಪ್ರಾಕಾರ ಮತ್ತು ಮಹಾದ್ವಾರಗಳು ಇನ್ನು ಮರಳಿನಿಂದ ಪೂರ್ತಿಯಾಗಿ ಬಿಡಿಸಲ್ಪಟ್ಟಿಲ್ಲ. 1925ರಲ್ಲಿ ಮಹಾದ್ವಾರದ ಮೇಲ್ಭಾಗವು ಮಾತ್ರ ಮರಳಿನಿಂದ ಬಿಡಿಸಲ್ಪಟ್ಟಿದ್ದು ಮತ್ತೆ ಮುಚ್ಚಿ ಹೋಗಿತ್ತು. ಕಳೆದ ಕೆಲ ವರ್ಷಗಳಿಂದ ಅದನ್ನು ಪುನಃ ಹೊರತೆಗೆದು ಜೀರ್ಣೋದ್ಧಾರ ಮಾಡು ಪ್ರಯತ್ನ ನಡೆಯುತ್ತಿದೆ.[59]

ಕೀರ್ತಿ ನಾರಾಯಣ ದೇವಾಲಯವು ಹೊಯ್ಸಳ ವಾಸ್ತುಶಿಲ್ಪಕ್ಕನುಗುಣವಾಗಿ ನಕ್ಷತ್ರಾಕಾರದ ನಾಲ್ಕು ಅಡಿ ಎತ್ತರದ ಜಗತಿಯ ಮೇಲೆ ನಿರ್ಮಾಣವಾಗಿದ್ದು ಗರ್ಭಗುಡಿ, ಸುಕನಾಸಿ, ನವರಂಗಗಳನ್ನೊಳಗೊಂಡಿದೆ. ಜಗತಿಯ ಮೆಟ್ಟಿಲುಗಳ ಪಕ್ಕದಲ್ಲಿ ಗೋಪುಗಳಿದ್ದವು, ಉತ್ತದ

ಮೆಟ್ಟಿಲುಗಳ ಹತ್ತಿರ ಹೊಯ್ಸಳ ಶಿಲ್ಪದಲ್ಲಿ ಅಪೂರ್ವವಾದ ಯಾಳಿಗಳಿವೆ. ಗೋಡೆಗಳ ಮೇಲೆ ಹೆಚ್ಚು ಕೆತ್ತನೆ ಕೆಲಸವಿಲ್ಲ. ಗೋಪುರಗಳು, ಲತಾಪಟ್ಟಿಕೆಗಳು, ಸಿಂಹ ಲಲಾಟ, ತೋರಣಗಳು ಮಾತ್ರ ಕಂಡು ಬರುತ್ತದೆ. ಗರ್ಭಗುಡಿಯ ಮೇಲಿನ ಗೋಪುರವನ್ನು ಬಹುಶಃ ವಿಜಯನಗರ ಕಾಲದಲ್ಲಿ ಕಟ್ಟಿದಂತೆ ಕಂಡುಬರುತ್ತದೆ.[60] ನವರಂಗದಲ್ಲಿ ಕಲ್ಲಿನ ಜಗತಿಗಳಿವೆ, ಪಶ್ಚಿಮ ಅಂಕಣವನ್ನು ಸುಕನಾಸಿಯಾಗಿಯೂ, ದಕ್ಷಿಣದ ಅಂಕಣವನ್ನು ಲಕ್ಷ್ಮಿಯ ಗುಡಿಯಾಗಿಯೂ ಮಾರ್ಪಾಡಿಸಿರುವರು. ನವರಂಗದ ಮುಖ್ಯ ನಾಲ್ಕು ಕಂಬಗಳು ಹೊಯ್ಸಳ ರೀತಿಯಲ್ಲಿವೆ, ಉಳಿದವು ಎಂಟು, ಹದಿನಾರು ಕೋನಗಳುಳ್ಳ ನಕ್ಷತ್ರಾಕಾರದಲ್ಲಿವೆ. ಸುಮಾರು ಹತ್ತು ಕಂಬಗಳನ್ನು ನಂತರ ಸೇರಿಸದಂತೆ ಕಂಡು ಬರುತ್ತದೆ. ಮೇಲ್ಭಾವಣಿಗಳಲ್ಲಿ ಲತೆ, ಸಿಂಹ, ಆನೆ, ನತ್ಕಿ, ಋಷಿ ಇತ್ಯಾದಿ ಕೆತ್ತನೆ ಕೆಲಸವಿದೆ. ಉತ್ತರ ಅಂಕಣದಲ್ಲಿ ವಿಜಯನಗರದ ಕಾಲದಲ್ಲಿ ಲಕ್ಷ್ಮಿಯು ತನ್ನ ನಾಲ್ಕು ಕೈಗಳಲ್ಲಿ ಅಭಯ ಪದ್ಮ ದಾನ ಮುದ್ರೆ ಹೊಂದಿರುವಳು ಸುಕನಾಸಿಯಲ್ಲಿ ನರಸಿಂಹ ವಿಗ್ರಹವಿದೆ, ಗರ್ಭಗೃಹದ ದ್ವಾರದ ಮೇಲೆ ಗಜಲಕ್ಷ್ಮಿಯ ವಿಗ್ರಹವನ್ನು ಕೆತ್ತಲಾಗಿದೆ.

ಗರ್ಭಗೃಹದ ಮಧ್ಯದಲ್ಲಿ ದೊಡ್ಡ ಎರಡೂವರೆ ಅಡಿ ಎತ್ತರದ ಗರುಡ ಪೀಠದ ಮೇಲೆ ಸುಮಾರು 10 ಅಡಿ ಎತ್ತರವುಳ್ಳ ಕೀರ್ತಿ ನಾರಾಯಣನ ಸ್ಥಾನಕ ಸಮಭಂಗಿಯ ವಿಗ್ರಹವು ಪ್ರತಿಷ್ಠಾಪಿಸಲ್ಪಟ್ಟಿದೆ. ಇದರ ಪ್ರಭಾವಳಿಯ ಮೇಲೆ ವಿಷ್ಣುವಿನ ದಶಾವತಾರಗಳಿವೆ.[61] ಮೂರ್ತಿ, ಶಂಖ, ಪದ್ಮ ಗದೆ ಚಕ್ರಗಳನ್ನು ಧರಿಸಿರುವ ಈ ಮೂರ್ತಿಯ ಪ್ರಭಾವಳಿಯ ಮೇಲೆ ವಿಷ್ಣುವಿನ ದಶಾವತಾರಗಳು ಕೆತ್ತಲ್ಪಟ್ಟಿವೆ. ಸುಂದರದಲ್ಲಿ ನಾಯಕಿ ಅಮ್ಮನವರ ಹೆಸರು ಅನ್ವರ್ಥವಾಗುವಂತೆ ದೇವಿಯ ವಿಗ್ರಹವು ಬಹಳ ಸುಂದರವಾಗಿದೆ. ದೇವಿಯು ಪದ್ಮಾಸನ ಸ್ಥಿತಿ ಚತುರ್ಭುಜಗಳಲ್ಲಿ ಅಭಯ, ಪದ್ಮ ಮತ್ತು ದಾನಮುದ್ರೆಗಳನ್ನು ಧರಿಸಿದ್ದಾಳೆ. ಅಮ್ಮನವರ ಹಾಗೂ ಆಳ್ವಾಚಾರ್ಯರ ವಿಗ್ರಹಗಳೆಲ್ಲವೂ ವಿಜಯನಗರದ ಕಾಲದಲ್ಲಾದವೆಂದು ತಿಳಿದು ಬರುತ್ತದೆ. ಕೀರ್ತಿನಾರಾಯಣ, ಶ್ರೀದೇವಿ, ಭೂದೇವಿ ಹಾಗೂ ಸುಂದರ ನಾಯಕಿ ಅಮ್ಮನವರ ಉತ್ಸವ ವಿಗ್ರಹಗಳು ಮನಮೋಹಕ ವಾಗಿವೆ.[62]

### 7.15 ತಲಕಾಡಿನ ಅವನತಿ

ವಿಜಯನಗರದ ಅರಸ ವೆಂಕಟಪತಿಯ ರಾಜ ಪ್ರತಿನಿಧಿಯಾಗಿ ಶ್ರೀರಂಗಪಟ್ಟಣದಲ್ಲಿದ್ದ ಶ್ರೀರಂಗರಾಯನು ದುರ್ಬಲನಾಗಿದ್ದನು. ಆದ್ದರಿಂದ ಅವನು ಶ್ರೀರಂಗಪಟ್ಟಣದ ಆಡಳಿತವನ್ನು ರಾಜ

ಒಡೆಯರ ಪಾಲಿಗೆ ಬಿಟ್ಟು ತಾನು ಮಾಲಂಗಿಗೆ ತೆರಳಿ ಮರಣ ಹೊಂದಿದನು. ಈ ಮಾಲಂಗಿಯಲ್ಲಿಯೇ ರಾಜ ಒಡೆಯರು ಶ್ರೀರಂಗರಾಯನ ಪತ್ನಿ ರಂಗಮ್ಮನ ಆಭರಣಗಳನ್ನು ಬಯಸಿ ಅವಳಿಂದ "ತಲಕಾಡು ಮರಳಾಗಿ, ಮಾಲಂಗಿ ಮಡುವಾಗಿ ಮೈಸೂರ ದೊರೆಗೆ ಮಕ್ಕಳಿಲ್ಲವಾಗಲಿ" ಎಂಬ ಶಾಪ ಪಡೆದುದು ಎಂದು ಹೇಳಲಾಗಿದೆ.

ಹೀಗೆ ಒಂದು ಕಾಲದಲ್ಲಿ ಇತಿಹಾಸ ಪ್ರಸಿದ್ಧವಾಗಿದ್ದ ತಲಕಾಡು ಈಗ ಅಂದಿನ ಐತಿಹಾಸಿಕ ವೈಭವವನ್ನು ಕಳೆದುಕೊಂಡಿದೆ. ದಕ್ಷಿಣ ಕಾಶಿ ಗಜಾರಣ್ಯ ಕ್ಷೇತ್ರವೆಂದು ಹೆಸರು ಪಡೆದಿದ್ದ ಈ ರಾಜಧಾನಿ ಅಂದು ರಾಜಧಾನಿ ಪಟ್ಟಣವಾಗಿತ್ತೆ ಎಂಬ ಸಂದೇಹವನ್ನು ಹುಟ್ಟಿಸುತ್ತದೆ. ಇಂದಿಗೂ ಈ ಮರಳ ರಾಶಿಯೇ ತಲಕಾಡಿನ ಹಳೇಬೀದಿಯನ್ನು ರಕ್ಷಣೆ ಮಾಡುತ್ತದೆ. ಹಿಂದೆ ನಯನಮನೋಹರ ವಾಗಿದ್ದ ಮರಳದಿಣ್ಣೆ ಸ್ವಾರ್ಥಿಗಳ ಕುತಂತ್ರಕ್ಕೆ ಬಲಿಯಾಗಿ ತನ್ನ ತನವನ್ನು ಕಳೆದುಕೊಂಡಿತು. ಹೀಗೆ ಚಾರಿತ್ರಿಕವಾಗಿ ಮತ್ತು ಪೌರಾಣಿಕವಾಗಿ ಮೆರೆದ ತಲಕಾಡು ಇಂದು ಸದ್ದುಗದ್ದಲವಿಲ್ಲದೆ ನಿರಾಭರಣ ಸುಂದರಿಯಂತೆ ಪ್ರವಾಸಿಗರನ್ನು ಆಕರ್ಷಿಸಿ ಕಂಗೊಳಿಸುತ್ತಿದೆ.

## ಅಧ್ಯಾಯ ಏಳರ ಅಡಿಟಿಪ್ಪಣಿಗಳು

1) ಪುಣ್ಯ ಸಂಗಮ ಬನ್ನೂರಿನಲ್ಲಿ ಜರುಗಿದ 2ನೇ ನರಸೀಪುರ ತಾಲ್ಲೋಕು ಸಾಹಿತ್ಯ ಸಮ್ಮೇಳನದ ಸಂಸ್ಕರಣ ಗ್ರಂಥ 1994 ಪು.181-182.

2) ತಲಕಾಡಿನ ಕೈಪಿಡಿ - ಪಂಚಲಿಂಗದರ್ಶನ ಮಹೋತ್ಸವ 1993 ಪು.8

3) ತಲಕಾಡಿನ ಕೈಪಿಡಿ - ಅದೇ 1993 ಪು.9

4) ತೀರ್ಥಕಲಾ ಕ್ಷೇತ್ರದರ್ಶಿನಿ - ಕರ್ನಾಟಕದ ಯಾತ್ರಾ ಸ್ಥಳಗಳು ಪು.213

5) ಕನ್ನಡ ವಿಷಯ ವಿಶ್ವಕೋಶ - ಸಂಪುಟ 9 ಪು.196

6) MAR 1911 – 12.p. 37 EC 111, M1 83, 99

7) S 11 IX (ii) No.430

8) EC. II S. B. 349 V.A.K. 1171 Hn 144

9) E C Bn 53. 75. 76 H & 139

10) V BI 31 21. 41

11) EC VII S K 106

12) S 11 IX (i) No. 258

13) S 11 IX (i) 370 of No. 1927

14) S 11 XI (i) No. 50

15) E C V AK 119. VII. SK 185

16) E C V Ag 79-81

17) E.C. III. K.D. 118

18) ಜಿ.ಆರ್. ರಂಗಸ್ವಾಮಯ್ಯ.ಬಿ. ಷೇಕ್ ಆಲಿ. – ದಕ್ಷಿಣ ಭಾರತದ ಇತಿಹಾಸ 1977 ಪು. 322

19) E.C. VI Cm 203 VCh 181

20) E C VI Kd. 12. MAR 1924 No. 10

21) VI. TK 53. 55

22) E.C VI Cm 170

23) Ibid T K 55

24) C K 52

25) E.C.V, BI. 54

26) QMJS X X X 111 No. 1 Karmarkar Society and Education in Medieval Karnataka p 51
27) E C VI. KD 157
28) E C X C + 88
29) E. C. IX Cg 86
30) E C VI. TK. 85
31) E C Vol. TK. 85
32) EC Vol IX CP 66
33) EC Vol IX D b 31
34) E V Col X K L 110. E C Vol VI Kd-49
35) E C Vol IX Db 31
36) E C Vol V I I I Sb, 137
37) E C Vol. V BI. 155
38) K. I. Vol II. 40
39) E C Vol VI-BI 166
40) A-P No 9 Vo 15
41) EC. Vol VI Kd 49
42) EC Vol V Ar-1'08
43) ಕ.ವಿ.ಪು. 22
44) E C VII part 1 SK-118
45) Gururajachar – E.S.K.P. 125
46) ಡಿ.ಎಸ್. ಜಯಪ್ಪಗೌಡ– ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಪು 142
47) E C Vol III Ng 142
48) E C Vol VII SK 18
49) E C Vol V Ar 108
50) E C Vol X Db 31
51) EC Vol V Ag 21
52) M A R 1912 p 45 para 91
53) ಬಿ.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ – ಮಧ್ಯಕಾಲೀನ ಕರ್ನಾಟಕದ ಇತಿಹಾಸ ಪು 58
54) ಎ ಇ ಪು 329

55) ಸೌ ಇ ಇ IX ಪು 223 ಕ್ರಿ.ಶ. 1127

56) ಎ ಇ XIII ಪುಟ 19 ಕ್ರಿ.ಶ. 1204

57) ಎಸ್. ಶ್ರೀಕಂಠಶಾಸ್ತ್ರಿ – ಹೊಯ್ಸಳ ವಾಸ್ತುಶಿಲ್ಪ 1965 ಪು 69

58) ತಲಕಾಡಿನ ಕೈಪಿಡಿ – ಪಂಚಲಿಂಗ ದರ್ಶನ ಮಹೋತ್ಸವ 1993 ಪು 30

59) ಎಸ್. ಶ್ರೀಕಂಠಶಾಸ್ತ್ರಿ – ಅದೇ 1965 ಪು 70

60) ಸಂಗಮ ಸ್ಮರಣ ಸಂಚಿಕೆ 1998 ಪು 198

61) ತಲಕಾಡಿನ ಕೈಪಿಡಿ – ಅದೇ 1993 ಪು 31

# ಅಧ್ಯಾಯ 8

## 8.1 ಶ್ರವಣಬೆಳಗೊಳದ ಐತಿಹಾಸಿಕ ಹಿನ್ನಲೆ

ಶ್ರವಣ ಬೆಳಗೊಳ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೋಕಿನಲ್ಲಿರುವ ಒಂದು ಪಟ್ಟಣವಾಗಿದೆ. ಇದು ಹಾಸನಕ್ಕೆ ಐವತ್ತೊಂದು ಕಿ.ಮೀ. ದೂರದಲ್ಲೂ ಚನ್ನರಾಯಪಟ್ಟಣಕ್ಕೆ ಹನ್ನೊಂದು ಕಿ.ಮೀ. ದೂರದಲ್ಲಿದೆ. 3.627 ಇದು ಜೈನರ ಪವಿತ್ರ ಯಾತ್ರಾಸ್ಥಳವಾಗಿದ್ದು ಇಲ್ಲಿನ ದೊಡ್ಡ ಬೆಟ್ಟದ ಮೇಲಿರುವ ಗೊಮ್ಮಟೇಶ್ವರ ವಿಗ್ರಹ ವಿಶ್ವವಿಖ್ಯಾತವಾಗಿದೆ.

ಶ್ರವಣ ಬೆಳಗೊಳಕ್ಕೆ ಅತಿ ಪ್ರಾಚೀನವಾದ ಇತಿಹಾಸವಿದೆ. ಶಾಸನಗಳಲ್ಲಿ ಈ ಸ್ಥಳವನ್ನು ಕಟವಪು, ಕಟಪ್ರ, ಕಟಪ್ಪ, ಕಟ್ವಪ್ಪ, ಕಟ್ಟಿಪ್ಪು, ವೆಳ್ಗೊಳ, ಬೆಳ್ಗೊಳ, ಧವಳ ಸರತೀರ್ಥ, ಶ್ವೇತ ಸರೋವರ ಮುಂತಾದ ಹೆಸರುಗಳಿಂದ ಕರೆಯಲಾಗಿದೆ.[1] ಅತಿ ಪ್ರಾಚೀನವಾದ ಸುಮಾರು ಆರರಿಂದ ಏಳನೇ ಶತಮಾನದ ಸಂಸ್ಕೃತ ಶಾಸನದಲ್ಲಿ ಕಟವಪ್ರ ಎಂಬ ರೂಪವಿದೆ. ಕಟವಪ್ರ, ಶೈಲ, ಕಟ್ಟಪುಗಿರಿ ಎಂಬ ರೂಪುಗಳು ಅದೇ ಕಾಲದ ಕನ್ನಡ ಶಾಸನಗಳಲ್ಲಿ ಕಂಡುಬಂದಿವೆ.

## 8.2 ಶ್ರವಣಬೆಳ್ಗೊಳ – ನಾಮ ವಿವೇಚನೆ

ಬೆಳ್ ಮತ್ತು ಕೊಳ ಎಂಬ ಪದಗಳ ಜೋಡಣೆಯಿಂದ ಬೆಳ್ಗೊಳವಾಗಿದೆ. ಊರಿನ ಮಧ್ಯೆ ಭಾಗದಲ್ಲಿ ಕೊಳವಿರುವುದರಿಂದ ಈ ಹೆಸರು ಬಂದಿದೆ. ಬೆಳ್ಳಗಿರುವ ಕೊಳವೆಂದು ಅರ್ಥ ಕೊಡುತ್ತದೆ. ಅಕ್ಕಪಕ್ಕದಲ್ಲಿ ಹಳೇ ಬೆಳ್ಗೊಳ ಮತ್ತು ಕೋಡಿ ಬೆಳ್ಗೊಳವೆಂಬುದು ಇರುವುದರಿಂದ ಅದನ್ನು ಬೇರ್ಪಡಿಸಲು ಹಾಗೂ ಬೆಟ್ಟದ ಮೇಲೆ ಶ್ರವಣನ ಮೂರ್ತಿಯಿರುವುದರಿಂದ ಇದಕ್ಕೆ ಶ್ರವಣ ಬೆಳ್ಗೊಳವೆಂಬ ಹೆಸರು ಬಂದಿದೆ.[2]

ಸಂಸ್ಕೃತದಲ್ಲಿ ವಪು ಎಂದರೆ ಗಿರಿ ಎಂದರ್ಥವಾಗುತ್ತದೆ. ಕಟ ಎಂದರೆ ಸಮಾದಿಗುಹೆ, ಸಮಾದಿ ಮಾಡತಕ್ಕ ಪ್ರದೇಶ, ಇಲ್ಲಿನ ಏಳನೇ ಶತಮಾನದ ಐವತ್ತನಾಲ್ಕು ಶಾಸನಗಳಲ್ಲಿ ನಲವತ್ತೊಂದು ಸಲ್ಲೇಖನ ವಿಧಿಗಳಿಂದ ದೇಹ ಮುಡಿಪಿದ ಸಂಗತಿಯನ್ನು ನಿರೂಪಿಸುವ ಜೈನ ಶಾಸನಗಳು ಇದನ್ನು ಗಮನಿಸಿ ಕಟವಪ್ರ ಎಂದರೆ ಸಮಾದಿ ಮರಣ ಹೊಂದಲು ಯೋಗ್ಯವಾದ ಗುಡ್ಡ ಎಂದು ಅರ್ಥೈಸಬಹುದು.

ಶಾಸನವೊಂದರಲ್ಲಿ ಈ ಸ್ಥಳವನ್ನು ದೇವರ ಬೆಳ್ಗೊಳ, ವೆಳಗೊಳ, ಕ್ರಿ.ಶ. 650ರ ಶಾಸನದಲ್ಲಿಯು ಬೆಳ್ಗೊಳ 800 ರ ಶಾಸನದಲ್ಲಿಯು ಬರುತ್ತದೆ. ಬೆಳ್ಗೊಳ, ಬೆಳುಗುಳ ಮತ್ತು ಬೆಳಗುಳ ಎಂಬ ಹೆಸರುಗಳು ಇತ್ತೀಚಿನ ಶಾಸನಗಳಲ್ಲಿ ಬರುತ್ತದೆ. ಗುಳ್ಳೆ ಕಾಯಿಯಿಂದಲೂ ಬಂದಿದೆಯೆಂದು ತಿಳಿಯುತ್ತದೆ. ಇದನ್ನು 'ದಕ್ಷಿಣ ಕಾಶಿಯೆಂದು ಮತ್ತು ಗೊಮ್ಮಟಪುರಿ'ಯೆಂದು ಕರೆಯುತ್ತಾರೆ.

ಶ್ರವಣ ಎಂದರೆ ಜೈನ ಋಷಿ ಇಲ್ಲಿ ಹಲವಾರು ಜೈನ ಯತಿಗಳು ನೆಲೆಸಿ ಸನ್ಯಾಸನ ಮುಂತಾದ ವ್ರತಗಳಿಂದ ಮರಣ ಹೊಂದಿದರು. ಎಂತಲೇ ಇದು ಕಾಲಾ ನಂತರ ಶ್ರವಣ ಬೆಳಗೊಳ ಎಂಬ ಹೆಸರನ್ನು ಪಡೆಯಿತು.

ಪ್ರಚಲಿತ ಐತಿಹ್ಯದಂತೆ ಕ್ರಿ.ಪೂ. ಮೂರನೇ ಶತಮಾನದಲ್ಲಿ ಮೌರ್ಯ ಅರಸನಾದ ಚಂದ್ರಗುಪ್ತನು ತನ್ನ ಗುರುವಾದ ಭದ್ರಬಾಹುವಿನೊಂದಿಗೆ ಬಂದು ಇಲ್ಲಿ ನೆಲೆಸಿದನು. ಇಲ್ಲಿನ ಅತಿ ಪ್ರಾಚೀನವಾದ ಏಳನೇ ಶತಮಾನದ ಶಾಸನದಲ್ಲಿ ಮಹಾವೀರನ ನಿರ್ವಾಣ ನಂತರದ ಗೌರಮಗಣದರ ಮುಂತಾದವರು ಜೈನ ಗುರುಗಳಾಗಿದ್ದು ಅವರಲ್ಲಿ ಒಬ್ಬನಾದ ಭದ್ರಬಾಹು ಸ್ವಾಮಿಯು ಉಜ್ಜಯಿನಿಯಲ್ಲಿದ್ದಾಗ ಹನ್ನೆರಡು ವರ್ಷಗಳ ಬರಗಾಲ ಪ್ರದೇಶವನ್ನು ಕ್ಷೋಭೆಗೆ ಒಳಪಡಿಸುತ್ತದೆ ಎಂಬ ಭವಿಷ್ಯವಾಣಿಯನ್ನು ನುಡಿದುದರ ಫಲವಾಗಿ ಸಂಪೂರ್ಣ ಸಂಘವು ಉತ್ತರಾಪಥದಿಂದ ದಕ್ಷಿಣಾಪಥಕ್ಕೆ ವಲಸೆ ಬಂದಿತೆಂದು ಇಲ್ಲಿ ಪ್ರಭಾ ಚಂದ್ರನೆಂಬ ಆಚಾರ್ಯನು ತನ್ನ ಅವಸಾನ ಕಾಲವನ್ನರಿತು ಸಮಾದಿ ಹೊಂದ ಬಯಸಿ, ಒಬ್ಬ ಶಿಷ್ಯನೊಡನೆ ಕಟವಪ್ರ ಗಿರಿಗೆ ಬಂದು ಇಲ್ಲಿ ಜೀವ ತೊರೆದನೆಂದು ಹೇಳಲಾಗಿದೆ. ಇಲ್ಲಿ ಹೆಸರಿಸಲಾದ ಭದ್ರಬಾಹು ಪ್ರಭಾ ಚಂದ್ರ ಹಾಗೂ ಅವನ ಶಿಷ್ಯರನ್ನು ಗುರುತಿಸುವುದರಲ್ಲಿ ಭಿನ್ನಾಭಿಪ್ರಾಯಗಳಿವೆ. ಭದ್ರಬಾಹು ಜೈನರ ಶ್ರುತ ಕೇವಲಿಗಳಲೊಬ್ಬನೆಂದು ಪ್ರಭಾಚಂದ್ರನು ಮೌರ್ಯ ಚಂದ್ರಗುಪ್ತನೆಂದು ರೈಸ್‌ರವರು ಊಹಿಸಿದರೆ ಭದ್ರಬಾಹು ಕ್ರಿ.ಪೂ. ಮೂವತ್ತರಿಂದ ಮೂವತ್ತೊಂದರಲ್ಲಿ ಬಂದ ಎರಡನೇ ಭದ್ರಬಾಹುವೆಂದು ಚಂದ್ರಗುಪ್ತನು ಆತನ ಶಿಷ್ಯನಾದ ಗುಪ್ತನೆಂದು ಫ್ಲೀಟ್ ಅಭಿಪ್ರಾಯ ಪಟ್ಟಿದ್ದಾರೆ.

ಭದ್ರಬಾಹು ಮತ್ತು ಚಂದ್ರಗುಪ್ತರು ಶ್ರವಣಬೆಳಗೊಳದ ಚಿಕ್ಕಬೆಟ್ಟದ ಗುಹೆಯಲ್ಲಿ ವಾಸಿಸಿ ಅಲ್ಲಿಯೇ ತಮ್ಮ ದೇಹ ತೊರೆದರೆಂಬ ನಂಬಿಕೆ ಏಳನೇ ಶತಮಾನದ ವೇಳೆಗಾಗಲೇ ಬಲವಾಗಿ ಬೇರೂರಿತ್ತು. ವಾದ ವಿವಾದಗಳೇನಿದ್ದರೂ ಇತರ ಶಾಸನಾಧಾರಗಳನ್ನವಲಂಬಿಸಿ ಭದ್ರಬಾಹು ಶ್ರುತ

ಕೇವಲಿ ಭದ್ರಬಾಹುವೆಂದು ಚಂದ್ರಗುಪ್ತನು ಮೌರ್ಯ ಚಂದ್ರಗುಪ್ತನೆಂದು ಮಾಡಿರುವ ಊಹೆ ಹೆಚ್ಚು ಸಮಂಜಸವಾಗಿದೆ.

ಶ್ರವಣ ಬೆಳಗೊಳದ ಶಾಸನಗಳಿಂದ ನಮಗೆ ಹಲವಾರು ಜೈನಯತಿಗಳ ಪರಿಚಯ ವಾಗುತ್ತದೆ. ಅವರು ಒಂದಿಲ್ಲೊಂದು ರೀತಿಯಿಂದ ಶ್ರವಣ ಬೆಳಗೊಳದೊಡನೆ ಸಂಬಂಧ ಹೊಂದಿದ್ದವರೇ ಅವರಲ್ಲಿ ಪದ್ಮನಂದಿ, ಗೃಧ್ರ ಪಿಚ್ಚ ಏಕಾಚಾರ್ಯ, ವಕ್ರ ಗ್ರೀವ, ಎಂದೆಲ್ಲ ಕರೆಯಲಾದ ಕೊಂಡ ಕುಂದಾಚಾರ್ಯ ಪ್ರಮುಖನಾದವನು. ಈತ ಪ್ರವಚನಸಾರವೆಂಬ ಕೃತಿಯ ಕರ್ತೃ, 'ಅರಿಷ್ಮ ನೇಮಿದೇವ', 'ನಾಗಮಂತಿಗಂತಿ' 'ಅಕ್ಷಯಕೀರ್ತಿ' ಮುಂತಾದವರು ಕಳಂತೂರು ನೆಡುಬೋರೆ, ಕಿತ್ತೂರು, ತಲಕಾಡು ಮುಂತಾದ ಸ್ಥಳಗಳಿಂದ ಹಲವಾರು ಜೈನ ಯತಿಗಳು ಇಲ್ಲಿಗೆ ಆಗಮಿಸಿದರು. ಇವರಲ್ಲದೆ ಸಾಮಾನ್ಯ ಪ್ರಜೆಗಳನ್ನು ಮತ್ತು ನಾಡಿನ ಅರಸರನ್ನು ಈ ಸ್ಥಳ ಆಕರ್ಷಿಸಿತು. ಮೌರ್ಯ ಚಂದ್ರಗುಪ್ತನಿಂದ ಮೈಸೂರಿನ ಒಡೆಯರ ಕಾಲದವರೆಗೂ ಕರ್ನಾಟಕದ ಅರಸರು ಈ ಪುಣ್ಯಕ್ಷೇತ್ರದಿಂದ ಪ್ರಭಾವಿತರಾಗಿ ಇಲ್ಲಿ ಹಲವಾರು ದಾನಧರ್ಮಗಳನ್ನು ಮಾಡಿದರು ಮತ್ತು ದತ್ತಿಗಳನ್ನು ಬಿಟ್ಟರು, ಇಲ್ಲಿನ ಪುಣ್ಯಕಾರ್ಯಗಳಲ್ಲಿ ಪಾಲ್ಗೊಂಡ ಗಂಗ ಅರಸರ ಪ್ರಮುಖವಾಗಿ ಎರಡನೇ ಮಾರಸಿಂಹನ ಶಾಸನಗಳು ಇಲ್ಲಿವೆ ಎರಡನೇ ಮಾರಸಿಂಹನ ಪ್ರಶಸ್ತಿ ಇಲ್ಲಿನ ಶಾಸನವೊಂದರಲ್ಲಿದ್ದು ಇದರಿಂದ ಆತನ ರಾಜಕೀಯ ಸಾಧನೆಗಳನ್ನು ತಿಳಿಯಬಹುದು ಮತ್ತು ಆತನ ನಂತರ ಬಂದ ನಾಲ್ಕನೇ ರಾಚಮಲ್ಲನ ಮಂತ್ರಿಯಾದ ಚಾವುಂಡರಾಯನ ಬಗ್ಗೆಯು ಸಾಕಷ್ಟು ವಿಚಾರ ತಿಳಿದು ಬರುತ್ತದೆ. ಬ್ರಹ್ಮ ಕ್ಷತ್ರ ಕುಲೋತ್ಪನ್ನನಾದ ಈತ ಎಲ್ಲಿ ಬಾಹುಬಲಿ ಮೂರ್ತಿಯನ್ನು ಸ್ಥಾಪಿಸಿದನು. ಇವನ ಹೆಸರಿನ ಬಸದಿಯೊಂದು ಚಿಕ್ಕಬೆಟ್ಟದಲ್ಲಿದ್ದರು ಅದನ್ನು ಚಾವುಂಡರಾಯನೇ ನಿರ್ಮಿಸಿದನೆಂದು ಹೇಳಲು ಸಾಕಷ್ಟು ಆಧಾರಗಳಿಲ್ಲ.

ಶ್ರವಣ ಬೆಳಗೊಳದ ಖ್ಯಾತಿಗೆ ಕಾರಣರಾದವರಲ್ಲಿ ಹೊಯ್ಸಳರ ರಾಣಿಯಾದ ಶಾಂತಲೆಯು ಒಬ್ಬಳು. ಇವಳು ಇಲ್ಲಿನ 'ಸವತಿಗಂಧವಾರಣ ಬಸದಿ'ಯನ್ನು ಕಟ್ಟಿಸಿದಳು. ಜೊತೆಗೆ ಹೊಯ್ಸಳರ ಅಧೀನಾಧಿಕಾರಿಗಳಾಗಿದ್ದ ಗಂಗರಾಜ ದಂಡನಾಯಕ ಹುಳ್ಳರಸ, ಏಚರಾಜ, ಚಂದ್ರಮೌಳಿ ಮುಂತಾದವರು ಇಲ್ಲಿ ಬಸದಿಗಳನ್ನು ನಿರ್ಮಿಸಿದರು ಮತ್ತು ವಿಶೇಷ ದಾನಧರ್ಮಗಳನ್ನು ಮಾಡಿದರು. ಏಚನ ಪತ್ನಿ ಪೋಚಿಕಬ್ಬೆ ಮತ್ತು ಸೊಸೆಲಕ್ಕಿ ಇವರು ಬಹುಶಃ ಶಾಸನ ಬಸದಿಯನ್ನು ಶಿವಭಕ್ತನಾದ ಚಂದ್ರಮೌಳಿಯ ಪತ್ನಿಯಾದ ಆಚಲ ದೇವಿಯು ಅಕ್ಕನ ಬಸದಿಯನ್ನು ಕಟ್ಟಿಸಿದಳು.

ಶ್ರವಣಬೆಳಗೊಳದಲ್ಲಿ ಇರುವಷ್ಟು ಶಾಸನಗಳ ದೇಶದ ಮತ್ಯಾವ ಕೇಂದ್ರದಲ್ಲಿಯೂ ಕಂಡು ಬರುವುದಿಲ್ಲ. ಕ್ರಿ.ಶ. ಆರುನೂರರಿಂದ ಹತ್ತೊಂಭತ್ತನೇ ಶತಮಾನಕ್ಕೆ ಸೇರಿದ ಶಾಸನಗಳಲ್ಲಿ 276 ಚಿಕ್ಕ ಬೆಟ್ಟದ ಮೇಲೆ 172 ದೊಡ್ಡ ಬೆಟ್ಟದ ಮೇಲೆ ಎಂಭತ್ತು ನಗರ ಪ್ರದೇಶದಲ್ಲಿದೆ. ಅವುಗಳಲ್ಲಿ ಹೆಚ್ಚಿನವು ಜೈನ ಶಾಸನಗಳಾಗಿವೆ. ಇಲ್ಲಿರುವ ಶಾಸನಗಳಲ್ಲಿ ಅತಿಮುಖ್ಯವಾದುದೆಂದರೆ ಚಂದ್ರಗಿರಿಯ ಮೇಲೆ ಹಾಸು ಬಂಡೆಯಲ್ಲಿ ಕೊರೆದಿರುವ ಶಾಸನಗಳು. ಅನೇಕ ಶಾಸನಗಳು ಇತಿಹಾಸಕ್ಕೆ ಬೇಕಾದ ಬಹುಮುಖ್ಯವಾದ ವಿಷಯಗಳನ್ನು ತಿಳಿಸುತ್ತವೆ. ಗಂಗರಾಜ್ಯದ ಹುಟ್ಟು ಮತ್ತು ಬೆಳವಣಿಗೆ ರಾಷ್ಟ್ರಕೂಟರ ಕೊನೆಯ ರಾಜನ ಮರಣ, ಹೊಯ್ಸಳ ರಾಜ್ಯ ಸ್ಥಾಪನೆಯಾಗಿ ವಿಸ್ತಾರವಾದ ರೀತಿ ಮುಂತಾದವುಗಳನ್ನು ಇಲ್ಲಿನ ಶಾಸನಗಳಿಂದ ತಿಳಿಯಬಹುದು. ಇದಲ್ಲದೆ ಕನ್ನಡ ಸಾಹಿತ್ಯ ಮತ್ತು ಭಾಷಾ ಸ್ವರೂಪ ಮತ್ತು ಬೆಳವಣಿಗೆಯನ್ನು ತಿಳಿಯಲು ಈ ಶಾಸನಗಳು ಬಹಳಮಟ್ಟಿಗೆ ಸಹಾಯಕವಾಗಿದೆ.[3]

### 8.3 ಶ್ರವಣಬೆಳಗೊಳ ನಗರದ ಸ್ಥಾಪನೆ

ಶ್ರವಣಬೆಳಗೊಳ ನಗರವನ್ನು ಸ್ಥಾಪಿಸಿದ ಕಾಲ ನಮಗೆ ತಿಳಿದು ಬಂದಿಲ್ಲ. ಆದರೆ ಕ್ರಿಶ. 1810 ಕ್ಕಿಂತ ಮುನ್ನ ಈ ನಗರಕ್ಕೆ 'ಶ್ರವಣ ಬೆಳ್ಗೊಳ' ವೆಂಬ ಹೆಸರಿರಲಿಲ್ಲವೆಂಬುದು ಸ್ಪಷ್ಟ 'ಕಳ್ವಪ್ಪು' ಮತ್ತು 'ಪೆರ್ಕ್ಳ್ವಪ್ಪು', ಎಂಬ ಪದಗಳು ಸಕ್ರಮವಾಗಿ ಚಿಕ್ಕ ಬೆಟ್ಟ ಹಾಗೂ ದೊಡ್ಡ ಬೆಟ್ಟವನ್ನು ಹೆಸರಿಸಿದರೆ 'ಬೆಳ್ಗೊಳ' ಅಥವಾ 'ಧವಳಸರಸ್' ಎಂಬ ಪದವು ಅಲ್ಲಿದ್ದ ಒಂದು ಕೊಳವನ್ನು ಸೂಚಿಸಿತ್ತು. ಆದರೆ ಇವಾವು ಅಲ್ಲಿಯ ಜನ ನಿವಾಸದ ಬಗ್ಗೆ ಬೆಳಕು ಚೆಲ್ಲುವುದಿಲ್ಲ, ಗೊಮ್ಮಟ ವಿಗ್ರಹವನ್ನು ಪ್ರತಿಷ್ಠಾಪಿಸಿದ ನಂತರ ಚಾವುಂಡರಾಯನು ಬಂದು ಮಠವನ್ನು ಇಲ್ಲಿ ಕಟ್ಟಿಸಿದನೆಂದು ಸ್ಥಳ ಪುರಾಣ ಹೇಳಿದರೂ ಶಾಸನಗಳಿಂದ ಇದಕ್ಕೆ ಪುಷ್ಟಿ ದೊರೆಯುವುದಿಲ್ಲ. ನಮಗಿಂದು ತಿಳಿದು ಬಂದಂತೆ ಮಠದ ಮುನಿಗಳ ಮೊದಲ ಉಲ್ಲೇಖ ಕ್ರಿ.ಶ. 1131 ರಲ್ಲಿ ನಗರದ ಮೊದಲ ಉಲ್ಲೇಖ ಕ್ರಿ.ಶ. 1159 ರಲ್ಲಿ ಬರುವುದು. ಈ ಮುನಿಗಳನ್ನು 'ಚಾರುಕೀರ್ತಿಭಟ್ಟಾರಕ' ರೆಂದು ನಗರವನ್ನು 'ಗೊಮ್ಮಟಪುರ' ವೆಂದು ಅಂದು ಕರೆಯಲಾಗಿತ್ತು. ಆದರೆ 'ಗೊಮ್ಮಟಪುರ' ವೆಂಬ ಹೆಸರನ್ನು 12ನೇ ಶತಮಾನದ ನಂತರ ಬಳಸಲಾಗಿಲ್ಲ.[4]

ಸುಮಾರು ಕ್ರಿ.ಶ. 650 ರಿಂದ 1889 ರವರೆಗೂ ಬೆಳ್ಗೊಳ ಎಂಬ ಹೆಸರು ಬಳಕೆಯಲ್ಲಿದ್ದು ಉಳಿದೆಲ್ಲ ಹೆಸರುಗಳಿಗಿಂತ ಇದು ಹೆಚ್ಚು ಜನಪ್ರಿಯವಾಗಿತ್ತು. ಮೊದಮೊದಲು (ಕ್ರಿ.ಶ. 7 ರಿಂದ 12 ನೇ ಶತಮಾನ) ಅಲ್ಲಿದ್ದ ಒಂದು ಕೊಳವನ್ನು ಮಾತ್ರ ಸೂಚಿಸುತ್ತಿದ್ದ ಈ ಪದವನ್ನು ಕಾಲಕ್ರಮದಲ್ಲಿ ಆ ಕೊಳದ ಸುತ್ತಮುತ್ತ ಬೆಳೆದ ಜನ ವಸತಿಗೂ ಬಳಸಲಾಯಿತೆಂದು ಕಾಣುವುದು. ಸುಮಾರು ಐದು ಮತ್ತು ಆರನೇ ಶತಮಾನದ ಕಾಲ ಶ್ರವಣ ಶ್ರಾವಕರ ಯಾತ್ರಾಸ್ಥಳ ಹಾಗೂ ಸಾಧನಾ ಸ್ಥಳವಾಗಿದ್ದ ಈ ದೇಶವು ಹನ್ನೆರಡನೇ ಶತಮಾನದಲ್ಲಿ ಒಂದು ವಸತಿ ಸ್ಥಾನವಾಗಿ ಪಟ್ಟಣವಾಗಿ ಬೆಳೆಯಿತು.

### 8.4 ಸಾಂಸ್ಕೃತಿಕ ಕೇಂದ್ರವಾಗಿ ಶ್ರವಣಬೆಳಗೊಳ

ಸಾಂಸ್ಕೃತಿಕ ಕೇಂದ್ರವೆಂದು ಒಂದು ಪ್ರದೇಶವನ್ನು ಕರೆದಾಗ ನಮ್ಮ ಮನಸ್ಸಿನಲ್ಲಿ ನಿರ್ದಿಷ್ಟ ಭಾವನೆಯಿರುತ್ತದೆಯೆಂದು ಭಾವಿಸಬೇಕಾಗಿಲ್ಲ. ಈ ಅನಿರ್ದಿಷ್ಟತೆ ಸಂಸ್ಕೃತಿ ಎಂಬ ಮಾತಿನಲ್ಲೇ ಇದೆ. ಬನವಾಸಿ, ಬಾದಾಮಿ, ಬಳ್ಳಿಗಾವೆ, ಬೇಲೂರು, ಮೇಲುಕೋಟೆ ಹಾಗೆಯೇ ಕೆಲವು ಪ್ರದೇಶಗಳನ್ನು ಸಾಂಸ್ಕೃತಿಕ ಕೇಂದ್ರಗಳೆಂದು ಕರೆಯುತ್ತೇವೆ. ಇಲ್ಲಿ ಬೇರೆ ಪ್ರದೇಶಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳು ದೊರಕಿರುವುದು ಗಮನಾರ್ಹವಾಗಿದೆ. ಶಿಲ್ಪವಸ್ತುಗಳಿರುವುದು ವಿದ್ಯಾ ಕೇಂದ್ರಗಳಾಗಿದ್ದುದು ಹಾಗೆ ಕರೆಯಲು ಕಾರಣಗಳಲ್ಲಿ ಕೆಲವು. ಇವುಗಳಲ್ಲಿ ರಾಜಧಾನಿಗಳು ಹಲವು ವ್ಯಾಪಾರ ಕೇಂದ್ರಗಳು ಕೆಲವು ಈ ಎಲ್ಲ ನಗರಗಳು ಒಂದಕ್ಕಿಂತ ಹೆಚ್ಚಿನ ಕಾರಣಗಳಿಂದಾಗಿ ಪ್ರಸಿದ್ಧಿ ಯನ್ನು ಹೊಂದಿ ಹತ್ತಿರದ ಮತ್ತು ದೂರದ ಪ್ರದೇಶಗಳಿಂದ ಜನರನ್ನು ತಮ್ಮತ್ತ ಸೆಳೆಯುತ್ತಿದ್ದವು. ಅವು ಆಯಾ ಪ್ರದೇಶದ ಜೀವನ ವಿಧಾನದ ಅತ್ಯುತ್ತಮ ಪ್ರತಿನಿಧಿಗಳಾಗಿ ನಿಂತು ಎಲ್ಲ ಜನರಿಗೆ ಮಾದರಿಯಾಗುತ್ತಿದ್ದವು ಮತ್ತು ಆ ಜೀವನ ವಿಧಾನ ಆ ಸುತ್ತಮುತ್ತಲ ಪ್ರದೇಶದ ಜನರ ಜೀವನ ವಿಧಾನಕ್ಕೆ ಮಾದರಿಯಾಗಿ ನಿಂತು ಅದನ್ನು ರೂಪಿಸುತ್ತಿದ್ದವು. ಅವು ಮತದ ಪ್ರಬಲ ಕೇಂದ್ರ ಗಳಾಗಿದ್ದುದರಿಂದ ಮತೀಯ ಕಾರಣದಿಂದಲೋ ಪ್ರವಾಸಾಕರ್ಷಣೆಯಿಂದಲೋ ಅಲ್ಲಿಗೆ ಬಹು ಸಂಖ್ಯೆಯ ಜನರು ಬಂದು ಹೋಗುತ್ತಿದ್ದರು. ರಾಜರು ಆ ಊರುಗಳನ್ನು ಪ್ರಯತ್ನ ಪೂರ್ವಕವಾಗಿ ಬೆಳೆಸುತ್ತಿದ್ದರು. ಆಗ ವ್ಯಾಪಾರ ಅಭಿವೃದ್ಧಿಯಾಗುತ್ತಿತ್ತು. ಉಳಿದ ಕಡೆಗಿಂತ ಅಲ್ಲಿ ಉದ್ಯೋಗಾವ ಕಾಶಗಳು ಜ್ಞಾನಕ್ಕೆ ಮತ್ತು ಕಲೆಗೆ ಪ್ರೋತ್ಸಾಹ ದೈಹಿಕಶಕ್ತಿ, ಉತ್ಸಾಹಗಳಿಗೆ ಮಾನ್ಯತೆ ದೊರೆಯುತ್ತವೆಯೆಂಬ ಕಾರಣಗಳಿಂದಾಗಿ ಶ್ರೇಷ್ಠ, ವಿದ್ವಾಂಸರು, ಕವಿಗಳು, ಶಿಲ್ಪಿಗಳು, ವಿದ್ಯಾರ್ಥಿಗಳು, ಧಾರ್ಮಿಕ ಜಿಜ್ಞಾಸೆಗಳು, ವರ್ತಕರು, ಸೈನಿಕರು ಹೀಗೆ ವಿವಿಧ ಜನರು ಬಂದು

ಹೋಗುತ್ತಿದ್ದರು. ಅನುಕೂಲವಾದರೆ ಅಲ್ಲೇ ನೆಲೆಸುತ್ತಿದ್ದರು. ಆ ಪ್ರದೇಶಗಳಿಗೆ ದೇಶದ ಬೌದ್ಧಿಕ, ಆಧ್ಯಾತ್ಮಿಕ, ಕಲಾತ್ಮಕ, ಲೌಕಿಕ ಸಂಪತ್ತನ್ನು ಬೆಳೆಸುವಲ್ಲಿ ಅವರ ಪಾತ್ರ ಪ್ರಮುಖವಾಗಿತ್ತು.' ಆಧುನಿಕ ಕಾಲದಲ್ಲಿ ನಿಂತು ನಾವು ಹಿಂದೆ ಕಣ್ಣು ಹಾಯಿಸಿದಾಗ ಆ ಪ್ರದೇಶದ ಉಳಿದೆಲ್ಲ ಭಾಗ ಕತ್ತಲಲ್ಲಿ ಮುಳುಗಿದ್ದು ಆ ಪ್ರದೇಶ ಇರುವ ಸ್ಥಳ ಮಾತ್ರ ಅಲ್ಲಿದ್ದ ಶಾಸನಗಳೋ ಮಂದಿರಗಳೋ ಬಿಟ್ಟ ಬಿಡು ದೀಪದ ಬೆಳಕಿನಿಂದ ಉಜ್ಜಲಿತವಾಗಿರುತ್ತದೆ. ದೇಶದ ಉಳಿದೆಲ್ಲ ಭಾಗಕ್ಕಿಂತ ಆ ಭಾಗ ಹೆಚ್ಚು ಜಾಗೃತವಾಗಿರುವಂತೆ ಚಟುವಟಿಕೆಯಿಂದ ಕೂಡಿರುವಂತೆ ಕಾಣಿಸುತ್ತದೆ. ದೂರದ ಬೇರೆ ಬೇರೆ ಸಂಸ್ಕೃತಿಗಳ ವಿದ್ಯೆಗಳ ಸಂಗಮ ಸ್ಥಾನವಾಗಿ ಅವೆಲ್ಲವನ್ನು ತನ್ನ ಮೂಲ ದ್ರವ್ಯದೊಡನೆ ಅರಗಿಸಿಕೊಂಡು ತನ್ನದೇ ಸಂಸ್ಕೃತಿಯನ್ನು ತನ್ನ ಸುತ್ತಮುತ್ತಲ ಪ್ರದೇಶಗಳಿಗೆ ವಿಸ್ತರಿಸುವ ಕಾರ್ಯವನ್ನು ಒಂದು ಸಂಸ್ಕೃತಿಯ ಕೇಂದ್ರ ಮಾಡುತ್ತದೆ.

ಈ ಹಿನ್ನಲೆಯಲ್ಲಿ ಶ್ರವಣಬೆಳಗೊಳವು ಪ್ರಾಚೀನ ಕರ್ನಾಟಕದ ಒಂದು ಸಾಂಸ್ಕೃತಿಕ ಕೇಂದ್ರವಾಗಿ ಕಾಣಿಸುವುದು ಮಾತ್ರವಲ್ಲದೆ ಕರ್ನಾಟಕದ ನಿರಂತರ ಇತಿಹಾಸ ಇರುವ ಏಕೈಕ ಸಾಂಸ್ಕೃತಿಕ ಕೇಂದ್ರವಾಗಿಯೂ ನಮ್ಮ ಮುಂದೆ ನಿಲ್ಲುತ್ತದೆ. ಕರ್ನಾಟಕದ ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಕೇಂದ್ರಗಳಲ್ಲಿ ಎರಡು ಅಂಶಗಳು ಗಮನಾರ್ಹವಾದುವು. ಕ್ರಿಸ್ತಪೂರ್ವ ಮೂರನೇ ಶತಮಾನದಿಂದ ಬೌದ್ಧ ಕೇಂದ್ರವಾಗಿದ್ದ ಬನವಾಸಿ, ಆ ಕಾಲಕ್ಕೋ ಅಥವಾ ಒಂದು ಶತಮಾನದ ಈಚೆಗೂ ಜೈನ ಕೇಂದ್ರವಾದ ಶ್ರವಣಬೆಳಗೊಳ ಉಳಿದುವೆಲ್ಲ ಕಾಲದ ದೃಷ್ಟಿಯಿಂದ ಇತ್ತೀಚಿನವು. ಅವುಗಳಲ್ಲಿ ಎಷ್ಟೋ ಬಹು ಹಿಂದೆಯೇ ತಮ್ಮ ಮಹತ್ವವನ್ನು ಕಳೆದುಕೊಂಡವು ಬನವಾಸಿಯು ಕೂಡ ಅಷ್ಟೆ ಆದರೆ ಕಳೆದ ಎರಡು ಸಾವಿರ ಇನ್ನೂರು ವರ್ಷಗಳಿಂದ ನಿರಂತರವಾಗಿ ಚೈತನ್ಯಪೂರ್ಣ ಕ್ರಿಯಾತ್ಮಕತೆಯನ್ನು ಉಳಿಸಿಕೊಂಡು ಬಂದಿರುವುದು ಶ್ರವಣಬೆಳಗೊಳದ ವೈಶಿಷ್ಟವಾಗಿದೆ. ಈ ಪ್ರಶಸ್ತಿ ಕರ್ನಾಟಕದ ಯಾವುದೇ ಸಾಂಸ್ಕೃತಿಕ ಕೇಂದ್ರಕ್ಕೂ ಇರುವಂತೆ ಕಾಣಿಸುವುದಿಲ್ಲ. ರಾಜಧಾನಿಗಳೆಂದು ಪ್ರಸಿದ್ಧವಾಗಿದ್ದ ಬೇಲೂರು, ಕಲ್ಯಾಣ, ಬನವಾಸಿಗಳು ಆಯಾ ಮನೆತನದ ಅವನತಿಯೊಂದಿಗೆ ನಿಸ್ತೇಜವಾದವು ಕೇವಲ ಪ್ರೇಕ್ಷಣೀಯ ಸ್ಥಳಗಳಾದವು ಉತ್ತಮ ಕಲೆಯ ಜೊತೆ ಪ್ರಬಲ ಧರ್ಮವೊಂದರ ಸಂಗಮವಾದಾಗ ಒಂದು ಸಾಂಸ್ಕೃತಿಕ ಕೇಂದ್ರ ತನ್ನ ಪರಂಪರೆಯನ್ನು ಜೀವಂತವಾಗಿ ಉಳಿಸಿಕೊಂಡು ಬರಲು ಸಾಧ್ಯ. ಭಾರತೀಯ ಪರಿಸರದಲ್ಲಿ ಕೊಪ್ಪಣ ಒಂದು ದೊಡ್ಡ ಜೈನಕೇಂದ್ರವಾದರು ಅದಕ್ಕೆ ಕಲೆಯ ಬೆಂಬಲ ದೊರಕಲಿಲ್ಲ ಹರಿಹರ, ಬಳ್ಳಿಗಾವೆಗಳಿಗೆ ಕಲೆಯ ಬೆಂಬಲವಿದ್ದರೂ ಧರ್ಮದ ಬೆಂಬಲ ದೊರೆಯಲಿಲ್ಲ. ಹೀಗಾಗಿ ಅವೆರಡು

ಅವನತಿ ಹೊಂದಿದವು ಅಲ್ಲಿ ಪ್ರಬಲವಾಗಿದ್ದ ಕಾಳಾಮುಖ ಸಂಪ್ರದಾಯ ಹದಿಮೂರನೇ ಶತಮಾನದಿಂದ ಈಚೆಗೆ ಕಳೆಗುಂದಿತು. ಉಡುಪಿ ಮತ್ತು ಮೇಲುಕೋಟೆಗಳಿಗೆ ಕಲೆಯ ಬೆಂಬಲ ಅಷ್ಟಾಗಿ ಇಲ್ಲವಾದ್ದರಿಂದ ಅವು ಉದ್ದಕ್ಕೂ ಮುಖ್ಯವಾಗಿ ಆಯಾ ಮತದ ಅನುಷಾಂಗಿಕವಾಗಿ ದೊಡ್ಡ ಸಾಂಸ್ಕೃತಿಯ ಕೇಂದ್ರವಾಗಿ ಉಳಿದವು. ರಾಜಕೀಯ ಬೆಂಬಲ ಪ್ರಾಚೀನ ಭಾರತದಲ್ಲಂತು ಧರ್ಮದ ಸಂವರ್ಧನೆಗೆ ಅಗತ್ಯವಾದರೂ ಅದು ನಿರಂತರವಾಗಿ ಒಂದು ಕೇಂದ್ರವನ್ನು ಜೀವಂತವಾಗಿ ಇಡುವುದರಲ್ಲಿ ಅಸಮರ್ಥವಾಗುತ್ತದೆ. ಶ್ರವಣಬೆಳಗೊಳ ಏಕೆ ಎರಡು ಸಾವಿರ ವರ್ಷಕ್ಕೂ ಮೀರಿದ ದೀರ್ಘಾವಧಿಯಲ್ಲಿ ಚೈತನ್ಯಪೂರ್ಣವಾಗಿ ಉಳಿದಿದೆಯೆಂಬುದಕ್ಕೆ ಉತ್ತರ ಇಲ್ಲಿದೆ. ಶ್ರೇಷ್ಠ ಕಲೆ ಧರ್ಮಗಳೆರಡು ಎಲ್ಲ ಬಗೆಯ ಜನರನ್ನು ತಮ್ಮತ್ತ ಸೆಳೆಯುವುದರಿಂದ ಅಲ್ಲಿ ಒಂದು ಸಮೃದ್ಧ ಸಂಸ್ಕೃತಿ ರೂಪುಗೊಳ್ಳಲು ಸಹಾಯಕವಾಗುತ್ತದೆ.

ಶ್ರವಣ ಬೆಳಗೊಳದ ಇತಿಹಾಸವೇ ಇದಕ್ಕೆ ಅನೇಕ ಆಧಾರಗಳನ್ನು ಒದಗಿಸುತ್ತದೆ. ಜೈನಮುನಿ ಭದ್ರಬಾಹುವಿನ ಕಾಲದಲ್ಲಿ ಜೈನಧರ್ಮ ಒಂದು ಕಳ್ಬಪ್ಪುವನ್ನು ಆಶ್ರಯಿಸಿತು. ಆ ಚಿಕ್ಕ ಬೆಟ್ಟ ಜೈನಧರ್ಮಕ್ಕೆ ದೊಡ್ಡ ಕೇಂದ್ರವಾಯಿತು. ಆದರೆ ಮೊದಲ ಸಾವಿರ ವರ್ಷ ಅದರ ಮೇಲೆ ಅನೇಕ ಮುನಿಗಳು ವಾಸವಾಗಿದ್ದು ತಪಸ್ಸನ್ನು ಮಾಡಿದರು. ಅಲ್ಲಿ ಅನೇಕರು ಪಾಂಡಿತ್ಯವನ್ನು ಗಳಿಸಿದರು. ಸಲ್ಲೇಖನ ವ್ರತದಿಂದ ಹಲವರು ಮರಣ ಹೊಂದಿದರು. ಆದರೆ ದೊಡ್ಡಬೆಟ್ಟ ಆಗ ಸಾಂಸ್ಕೃತಿಕವಾಗಿ ಇರಲಿಲ್ಲ. ಈಗಿನ ಶ್ರವಣಬೆಳಗೊಳ ಊರು ಭೌತಿಕವಾಗಿಯೂ ಇರಲಿಲ್ಲ. ಚಿಕ್ಕ ಬೆಟ್ಟದ ಮೇಲಿನ ಬಸದಿಗಳಲ್ಲಿ ಕಲೆಯ ದೃಷ್ಟಿಯಿಂದ ಪ್ರಮುಖವಾದವು ಆ ಕಾಲಕ್ಕೆ ಹೆಚ್ಚಾಗಿ ಇರಲಿಲ್ಲ. ದೊಡ್ಡ ಬೆಟ್ಟದ ಮೇಲಕ್ಕೆ ಹೋದ ಕೆಲವರು ತಮ್ಮ ಹೆಸರುಗಳನ್ನು ಕೆತ್ತಿರುವುದನ್ನು ಬಿಟ್ಟರೆ (ಉದಾ. ರೂವಾರಿ, ಬಿದಿಗ, ಜೆಡ್ಡುಗ) ಅಲ್ಲಿ ಯಾವ ಸ್ಮಾರಕವೂ ಇಲ್ಲ. ಅಲ್ಲಿಯವರೆಗೆ ಶ್ರವಣಬೆಳಗೊಳ ಮುಖ್ಯವಾಗಿ ಧಾರ್ಮಿಕ ಕೇಂದ್ರವಾಗಿತ್ತು. ಆದರೆ ಕ್ರಿ.ಶ. 981ರ ಸುಮಾರಿನಲ್ಲಿ ಗೊಮ್ಮಟ ವಿಗ್ರಹ ನಿರ್ಮಾಣವಾದುದು ಇಡೀ ಪ್ರದೇಶಕ್ಕೆ ವಿದ್ಯುತ್ ಪ್ರವಾಹವನ್ನೇ ಹರಿಸಿತು.

ಗೊಮ್ಮಟ ವಿಗ್ರಹಕ್ಕೆ ಅದ್ಭುತ ಸುತ್ತಾಲಯ ಬಂದಿತು. ಆಗ ಬೇರೆ ಬೇರೆ ಬಸದಿಗಳು ನಿರ್ಮಾಣವಾದವು. ಬುಡದಲ್ಲಿ 'ಗೊಮ್ಮಟಪುರ' ಎಂಬ ಇನ್ನೊಂದು ಹೆಸರಿನ ಊರು ಈಗಿನ ಶ್ರವಣಬೆಳಗೊಳ ಬೆಳೆಯಿತು. ಚಿಕ್ಕ ಬೆಟ್ಟದ ಮೇಲೆ ಪಾರ್ಶ್ವನಾಥ ಬಸದಿ, ಕತ್ತಲೆ ಬಸದಿ, ಸವತಿ ಗಂಧವಾರಣ ಬಸದಿ ಇತ್ಯಾದಿ ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಮುಖವಾದವು. ಚಂದ್ರಗುಪ್ತ

ಬಸದಿಯ ಚಿತ್ರಪಟ್ಟಿಕೆಗಳು ಹನ್ನೆರಡನೆ ಶತಮಾನದಲ್ಲಿ ನಿರ್ಮಾಣವಾದಾಗ ಚಿಕ್ಕ ಬೆಟ್ಟ ಮುಖ್ಯವಾಗಿ ಕಲೆಗೆ ಆಕರಗಳಾಗಿ ಅವೆರಡು ಸೇರಿ ಶ್ರವಣ ಬೆಳ್ಗೊಳ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆದುದರ ಒಂದು ರೋಮಾಂಚಕ ಕಥೆ ನಮ್ಮ ಮುಂದೆ ಬರುತ್ತದೆ.

ಶ್ರವಣಬೆಳಗೊಳ ಕರ್ನಾಟಕ ಸಂಸ್ಕೃತಿಯ ಸಂಕ್ಷಿಪ್ತಾಕೃತಿ. ಕರ್ನಾಟಕ ಸಂಸ್ಕೃತಿಯ ಉತ್ತಮಾಂಶಗಳನ್ನು ಒಂದೆಡೆ ಕಾಣಬೇಕೆಂದು ಬಯಸುವವರಿಗೆ ಶ್ರವಣಬೆಳಗೊಳದಂತಹ ಮತ್ತೊಂದು ಸ್ಥಳ ದೊರಕಲಾರದು. ಕ್ರಿ.ಶ. ಆರನೇ ಶತಮಾನದಿಂದ ಇಲ್ಲಿಯವರೆಗೆ ಕನ್ನಡ ಲಿಪಿ, ಭಾಷೆಗಳ ನಿರಂತರ ಬೆಳವಣಿಗೆ ನೋಡ ದೊರಕುವ ಏಕೈಕ ಪ್ರದೇಶ ಇದಾಗಿದೆ. ಕ್ರಿ.ಶ. 550 ರ ತಮಟುಕಲ್ಲು ಶಾಸನ ಬಿಟ್ಟರೆ ಮೊಟ್ಟ ಮೊದಲ ಉತ್ಕೃಟ ಕಾವ್ಯವಾಗಲಿ ಪದ್ಯಗಳಾಗಲಿ ದೊರಕುವುದು ಇಲ್ಲಿ ಮತ್ತು ಉದ್ದಕ್ಕೂ ಶ್ರವಣಬೆಳಗೊಳ ಶಿವಕೋಟ್ಯಾಚಾರ, ಪಂಪ, ರನ್ನ, ಚಾವುಂಡರಾಯನಂತಹ ಶ್ರೇಷ್ಟ ಕವಿಗಳ ಜೊತೆ ನೇರ ಸಂಪರ್ಕವನ್ನು ಪಡೆದಿದ್ದಿತು ಮತ್ತು ನೂರಾರು ಕನ್ನಡ ಕವಿಗಳುಗೆ ಅದು ಸ್ಫೂರ್ತಿ ಸ್ಥಾನವು ಆಗಿತ್ತು. ಕನ್ನಡ ಭಾಷೆ ಮತ್ತು ಸಾಹಿತ್ಯಕ ಪರಂಪರೆಗಳ ಜೊತೆ ಅದಕ್ಕಿದ್ದ ಸಂಬಂಧ ಗಮನಾರ್ಹವಾಗಿದೆ. ರಾಷ್ಟ್ರಕೂಟ, ಗಂಗ, ಹೊಯ್ಸಳ ಕರ್ನಾಟಕದ ಬಹುತೇಕ ಎಲ್ಲ ರಾಜವಂಶದವರು ಶ್ರವಣಬೆಳಗೊಳವನ್ನು ಅಭಿವೃದ್ಧಿಪಡಿಸಲು ಯತ್ನಿಸಿದ್ದಾರೆ ಎಂದರೆ ಕರ್ನಾಟಕದ ರಾಜಕೀಯ ಆಗುಹೋಗುಗಳ ಜೊತೆ ಅದು ಸಂಬಂಧಿಸಿದ್ದಿತು. ಅದು ದೊಡ್ಡ ವಿದ್ಯಾಕೇಂದ್ರ ಶಿಲ್ಪಿ, ವಾಸ್ತುಶಿಲ್ಪ, ಚಿತ್ರಕಲೆಗಳ ಬೀಡು, ಇಂದ್ರರಾಜ, ಚಾವುಂಡರಾಯ, ಅತ್ತಿಮಬ್ಬಗೆ, ಗಂಗರಾಜ, ವಿಷ್ಣುವರ್ಧನ, ಶಾಂತಲೆಯರಂತಹ ವ್ಯಕ್ತಿಗಳು ಅದರ ಆಶ್ರಯದಲ್ಲಿ ತಮ್ಮ ಜೀವನದ ಸಾಫಲ್ಯವನ್ನು ಕಂಡರು. ತೀರ್ಥಂಕರನಲ್ಲದಿದ್ದರೂ ಮನುಷ್ಯನ ಅಸೀಮನಾದ ತ್ಯಾಗದ ಸಂಕೇತವಾಗಿರುವ ಗೊಮ್ಮಟನನ್ನು ತನ್ನ ತಲೆಯಲ್ಲಿ ಮುಡಿಯಿತು. ಪ್ರಮುಖವಾಗಿ ಜೈನ ಕೇಂದ್ರವಾದರೂ ಬೇರೆ ಬೇರೆ ಧರ್ಮಗಳಿಗೆ ಭೇದವಿಲ್ಲ ಎಂದು ಘೋಷಿಸಿದ ಬುಕ್ಕನ ಶಾಸನ ವಿರುವುದು ಇಲ್ಲಿಯೇ ಇದೆಲ್ಲದರ ಜೊತೆಗೆ ಅಲ್ಲಿಯ ಪ್ರಕೃತಿ ಸೌಂದರ್ಯ, ಸುತ್ತಮುತ್ತಲಿನ ನೂರಾರು ಕೆರೆಗಳು ಒಳ್ಳೆಯ ಮಳೆಯಿಂದಾಗಿ ಜನರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿದೆ. ಈ ಎಲ್ಲ ಅನುಕೂಲತೆಗಳು ಕರ್ನಾಟಕದ ಬೇರೆ ಯಾವುದೇ ಸಾಂಸ್ಕೃತಿಕ ಕೇಂದ್ರಕ್ಕೂ ದೊರಕಿಲ್ಲವೆಂಬುದನ್ನು ನೆನೆದರೆ ಕರ್ನಾಟಕದ ಯಾವ ಮೌಲ್ಯಾದರ್ಶಗಳಿಗೆ ಮೊದಲಿನಿಂದ ತುಡಿದಿದೆಯೋ ಅವೆಲ್ಲವುಗಳ ಏಕೈಕ ಸಾಕಾರರೂಪ ಶ್ರವಣಬೆಳಗೊಳ ಎಂದರೆ ತಪ್ಪಾಗಲಾರದು.

### 8.5 ಶ್ರವಣಬೆಳಗೊಳದ ರಾಜಕೀಯ ಸಂಪರ್ಕ

ಕ್ರಿ.ಪೂ. ಮೂರು ಅಥವಾ ಎರಡನೇ ಶತಮಾನದಲ್ಲಿ ಉತ್ತರದ ಚಂದ್ರಗುಪ್ತ ಚಕ್ರವರ್ತಿ ತನ್ನ ಗುರುವಾದ ಭದ್ರಬಾಹುವಿನೊಡನೆ ಚಿಕ್ಕಬೆಟ್ಟದಲ್ಲಿ ನೆಲೆಸಿದ್ದು ಶ್ರವಣಬೆಳಗೊಳ ಜೈನಧರ್ಮದ ಪ್ರಬಲ ಕೇಂದ್ರವಾಗಿ ಬೆಳೆಯಲು ಕಾರಣವಾಯಿತು. ಚಂದ್ರಗುಪ್ತ ಭದ್ರಬಾಹುವಿನೊಡನೆ ಒಬ್ಬನೇ ಬಂದಿರಲಾರನು. ಅವನ ಜೊತೆ ಅವನ ಕುಟುಂಬದವರು ಬಂದಿರಬಹುದು. ಆದರೆ ಮುನಿಗಳಂತು ತಮ್ಮ ಜೊತೆ ಗ್ರಂಥಗಳನ್ನು ತಂದು ಅದೊಂದು ತಪಸ್ಸಿನ ಅಧ್ಯಯನದ ಸ್ಥಳವಾಗಲು ಕಾರಣರಾದರು. ಉತ್ತರದ ಸಂಸ್ಕೃತಿ, ಪ್ರಾಕೃತ ಭಾಷೆಗಳು ಇಲ್ಲಿನ ದೇಶೀಯ ಸಂಸ್ಕೃತಿ ಕನ್ನಡ ಭಾಷೆಗಳ ಮೇಲೆ ಬೀರಿದ ಪ್ರಭಾವವೇನು ಎಂಬುದನ್ನು ನಾವು ಗುರುತಿಸಲು ಸಾಧ್ಯವಿಲ್ಲದಿದ್ದರೂ ಆ ಪ್ರಭಾವವನ್ನು ಮಾತ್ರ ಅಲ್ಲಗಳೆಯಲಾಗುವುದಿಲ್ಲ. ಗಂಗ ದೊರೆಗಳಲ್ಲಿ ಶಿವಮಾರ ಎರಡನೇ ಮಾರಸಿಂಹ ನಾಲ್ಕನೇ ರಾಚಮಲ್ಲರಲ್ಲದೆ, ಗಂಗರ ಮಂತ್ರಿಯಾದ ಚಾವುಂಡರಾಯ ಶ್ರವಣಬೆಳಗೊಳದ ಜೊತೆ ನಿಕಟ ಸಂಪರ್ಕವನ್ನು ಹೊಂದಿದ್ದನು. ಗೊಮ್ಮಟ ವಿಗ್ರಹದ ನಿರ್ಮಾತನಾದ ಚಾವುಂಡರಾಯ ನಿಂದ ಶ್ರವಣಬೆಳಗೊಳ ತನ್ನ ಸಾಂಸ್ಕೃತಿಕ ಇತಿಹಾಸದಲ್ಲಿ ಒಂದು ಹೊಸ ತಿರುವನ್ನು ಪಡೆಯಿತು.[6]

ಶ್ರವಣಬೆಳಗೊಳದಲ್ಲಿ ದೊರಕಿರುವ 573 ಶಾಸನಗಳಲ್ಲಿ ಒಟ್ಟು 80 ಹೊಯ್ಸಳರ ಶಾಸನಗಳಾಗಿವೆ. ಗಂಗರಂತೆ ಹೊಯ್ಸಳರು ಶ್ರವಣಬೆಳಗೊಳದ ಸಾಂಸ್ಕೃತಿಕ ಶ್ರೀಮಂತಿಕೆಗೆ ಶ್ರಮಿಸಿದ್ದಾರೆ. ಅದರಲ್ಲೂ ಹೊಯ್ಸಳರ ವಿಷ್ಣುವರ್ಧನನ ಪತ್ನಿಯಾದ ಶಾಂತಲೆ ಮತ್ತು ಅವನ ಮಂತ್ರಿಯಾದ ಗಂಗರಾಜ ಕಟ್ಟಿಸಿದ ಕಟ್ಟಡಗಳಿಗಾಗಲೀ ಮತ್ತು ನಿಲ್ಲಿಸಿದ ಶಾಸನಗಳಿಗಾಗಲೀ ಲೆಕ್ಕವಿಲ್ಲ. ಶಾಂತಲೆ ತನ್ನ ಹೆಸರಿನಲ್ಲಿ ಚಿಕ್ಕಬೆಟ್ಟದ ಮೇಲೆ ಸವತಿಗಂಧವಾರಣ ಬಸದಿಯನ್ನು ಕಟ್ಟಿಸಿದರೆ, ಗಂಗರಾಜ ದೊಡ್ಡ ಬೆಟ್ಟದ ಮೇಲೆ ಗೊಮ್ಮಟ ವಿಗ್ರಹದ ಸುತ್ತ 'ಸುತ್ತಾಲಯ'ವನ್ನು ನಿರ್ಮಿಸಿದ್ದಾನೆ. ಶಾಂತಲೆ ಶಿವಗಂಗೆಯಲ್ಲಿ ಸಲ್ಲೇಖನ ವ್ರತದಿಂದ ಮರಣವನ್ನು ಹೊಂದಿದರೆ ಅದರಿಂದ ತೀವ್ರ ದುಃಖಿತಳಾದ ಅವಳ ತಾಯಿ ಮಾಚಿಕಬ್ಬೆ ಶ್ರವಣಬೆಳಗೊಳದಲ್ಲಿ ಅದೇ ವ್ರತವನ್ನು ತಾನು ಆಚರಿಸಿ ಮರಣವನ್ನು ಹೊಂದಿದಳು.

ವಿಷ್ಣುವರ್ಧನನ ದಂಡನಾಯಕ ಗಂಗವಿಯ್ಯ ಅಥವಾ ಗಂಗರಾಜನು ಶ್ರವಣಬೆಳಗೊಳದ ಪಕ್ಕದಲ್ಲಿರುವ ಜಿನನಾಥಪುರವನ್ನು ನಿರ್ಮಿಸುತ್ತಾನೆ. ಗಂಗರಾಜನು ಹಲವಾರು ದೇವಾಲಯಗಳನ್ನು ಕಟ್ಟಿಸಿ ಇನ್ನು ಹಲವು ದೇವಾಲಯಗಳನ್ನು ಪುನರುಜ್ಜೀವನಗೊಳಿಸಿದ್ದರಿಂದ ಜೈನಧರ್ಮ ಹಿಂದಿನಂತೆ

ಬಹುಶಃ ಗಂಗ ದೊರೆಗಳ ಕಾಲದಂತೆ ತಲೆಯೆತ್ತಿ ಬೆಳಗಿತು ಎಂದು ಒಂದು ಶಾಸನ ಹೇಳುತ್ತದೆ. ವಿಷ್ಣುವರ್ಧನನ ಮಗನಾದ ವೀರನರಸಿಂಹನ ಮಂತ್ರಿಯಾದ ಹುಳ್ಳ--ರಾಜನು ತನಗಿಂತ ಸ್ವಲ್ಪ ಹಿಂದಿನ ಗಂಗರಾಜನ ಕೆಲಸಗಳನ್ನು ಮುಂದುವರಿಸಿ ಜೈನಧರ್ಮವನ್ನು ಮೇಲೆತ್ತಿದ್ದ ಮೂವರು ಮಂತ್ರಿಗಳಲ್ಲಿ ಚಾವುಂಡರಾಯ, (ಗಂಗರಾಜ ಮತ್ತು ಹುಳ್ಳ) ಒಬ್ಬ ಎಂದು ಜೈನಶಾಸನ ಹೊಗಳುತ್ತದೆ. ಅವನಂತೆಯೇ ಇವರ ಪತ್ನಿಯಾದ ಪದ್ಮಾವತಿ ಜೈನಭಕ್ತಿಯುಳ್ಳ ಶ್ರವಣಬೆಳಗೊಳ ದಲ್ಲಿ ಚತುರ್ವಿಂಶತಿ ತೀರ್ಥಂಕರ ಬಸದಿಯನ್ನು ಕಟ್ಟಿಸಿದರು.

### 8.6 ವ್ಯಾಪಾರ ಕೇಂದ್ರವಾಗಿ ಶ್ರವಣಬೆಳಗೊಳ

ಶ್ರವಣಬೆಳಗೊಳದ ವರ್ತಕರನ್ನು ಮಾಣಿಕ್ಯ ನಕರ ಅಥವಾ ಮಣಿಕ್ಯ ನಗರಗಳೆಂದು ಕರೆಯಲಾಗಿದೆ. ಅವರು ಶ್ರವಣಬೆಳಗೊಳದಲ್ಲಿ ಮಾತ್ರವಲ್ಲದೆ ದೂರದ ಊರುಗಳ ಜೊತೆಯೂ ಮತ್ತು ಸಮುದ್ರದಾಚೆಗೂ ವ್ಯಾಪಾರ ಮಾಡುತ್ತಿದ್ದರು. ವರ್ತಕರು ನಿರ್ಮಿಸಿದ ಹಲವಾರು ಬಸದಿ ಮತ್ತು ಶಿಲ್ಪಗಳು ಶ್ರವಣಬೆಳಗೊಳವನ್ನು ಬೆಳೆಸಿವೆ. ಆ ಊರಿನ_ ವರ್ತಕರಿಗೆ ಮುಖ್ಯಸ್ಥನಾಗಿದ್ದ 'ಪಟ್ಟಣಶೆಟ್ಟಿಯ' ನೇತೃತ್ವದಲ್ಲಿ ಹಲವಾರು ದಾನಧರ್ಮಕಾರ್ಯಗಳು ಮತ್ತು ನಿಬಂಧನಗಳು ನಡೆದಿವೆ. ಅಂತಹ ಪಟ್ಟಣಶೆಟ್ಟಿಯರಲ್ಲಿ ಹನ್ನೆರಡನೇ ಶತಮಾನದ ಮಲ್ಲಶೆಟ್ಟಿ ಪ್ರಮುಖನಾಗಿದ್ದಾನೆ. ಶ್ರವಣಬೆಳಗೊಳದಲ್ಲಿ ನಾಣ್ಯಗಳನ್ನು ಟಂಕಿಸುತ್ತಿದ್ದ 'ಕಮ್ಮಟ'ವಿದ್ದಿರಬೇಕು. ಕಮ್ಮಟದ ರಾಮಿಶೆಟ್ಟಿ ಎಂಬುವನ ಉಲ್ಲೇಖ ಒಂದು ಕಡೆ ಇದೆ. ಚಿನ್ನ, ಬೆಳ್ಳಿ, ಅರಿಸಿನ, ಅಡಿಕೆ, ಮೆಣಸು, ಹತ್ತಿ, ಉಪ್ಪು, ಗೋಧಿ, ಕಡಲೆ, ಸುಗಂಧ ದ್ರವ್ಯಗಳು, ಕಬ್ಬು, ಹೂವುಗಳು ಇತ್ಯಾದಿ ವಿವಿಧ ಬಗೆಯ ವ್ಯಾಪಾರ ಸರಕುಗಳ ಹೆಸರುಗಳನ್ನು ನಾವು ಹಿಂದಿನ ದಾಖಲೆಗಳಲ್ಲಿ ಕಾಣುತ್ತೇವೆ. ವ್ಯಾಪಾರಿಗಳೇ ಸೇರಿ ನಕರ ಜಿನಾಲಯವನ್ನು ಕಟ್ಟಿಸಿದರು. ಅಲ್ಲಿಯ ಶಾಸನಗಳಲ್ಲಿ ಹಲವಾರು ನಾಣ್ಯಗಳು ಅಳತೆಗೋಲುಗಳು, ತೂಕಗಳ ಮಾತುಗಳು ಬಂದಿವೆ. ಅಲ್ಲಿನ ಶ್ರೀಮಂತರು ಬಡ್ಡಿ ವ್ಯಾಪಾರವನ್ನು ಇಟ್ಟುಕೊಂಡಿದ್ದಕ್ಕೆ ಆಧಾರಗಳಿವೆ.[7] ಶ್ರವಣಬೆಳಗೊಳದ ಸುತ್ತಮುತ್ತಲಿನ ಪ್ರದೇಶಗಳ ಪ್ರಧಾನ ವೃತ್ತಿಯಾಗಿದ್ದ ವ್ಯವಸಾಯಕ್ಕೆ ಸಂಬಂಧಿಸಿದ ವಿಷಯ ಅಲ್ಲಿನ ಶಾಸನದಲ್ಲಿದೆ. ನೂರಾರು ಕೆರೆಗಳಿಂದ ತುಂಬಿದ್ದ ಈ ಪ್ರದೇಶ ಮಲೆನಾಡಿಗೆ ಸಮೀಪವಿರುವುದರಿಂದ ಬರಗಾಲಕ್ಕೆ ತುತ್ತಾಗುತ್ತಿದ್ದುದು ಕಡಿಮೆಯೆಂದೇ ಹೇಳಬೇಕು. ಅಲ್ಲಿನ ರೈತರ ಬೆಳೆಗೆ ಇದು ವ್ಯಾಪಾರ ವಿನಿಮಯ ಕೇಂದ್ರವು ಆಗಿತ್ತು. ಶ್ರವಣಬೆಳಗೊಳದ ಶಾಸನಗಳಲ್ಲಿ ನೂರಾರು ತೆರಿಗೆಗಳು ರಾಜ್ಯದ ಆದಾಯದ ಒಂದು ಪ್ರಮುಖ ಭಾಗವಾಗಿತ್ತು.

## 8.7 ಅಂಗಡಿ

ಸಂತೆಯಲ್ಲಿ ಬಯಲು ಅಂಗಡಿ ಕಟ್ಟಿದ ಅಂಗಡಿಗಳಿದ್ದು ಸಂತೆಯ ದಿನ ಮಾತ್ರ ತೆರೆದಿರುತ್ತಿದ್ದರೆ, ಪೇಟೆ ಪಟ್ಟಣಗಳಲ್ಲಿ ಕಟ್ಟಿದ ಅಂಗಡಿಗಳು ಪ್ರತಿನಿತ್ಯ ಕಾರ್ಯ ನಿರ್ವಹಿಸುತ್ತಿದ್ದವು. ಪೇಟೆಯಲ್ಲಿ ಅಂಗಡಿಸಾಲುಗಳಿರುತ್ತಿದ್ದರೆ, ಪಟ್ಟಣದ ಒಳಭಾಗದಲ್ಲಿ ಬಿಡಿಬಿಡಿಯಾದ ಅಂಗಡಿಗಳಿರುವುದು ಕಂಡುಬರುತ್ತದೆ. ವರ್ತಕರ ಅಂಗಡಿ ಸಾಲು ಅಥವಾ ವಾಸಸ್ಥಳವೇ 'ಹರದ ಗೇರಿ' ಇದಲ್ಲದೆ "ಬಸದಿಯ ಮುಂದಣ ಅಂಗಡಿ ಇಪ್ಪತ್ತು" ಎಂಬುದು ದೇವಾಲಯದ ಮುಂಭಾಗದಲ್ಲಿ ಅಂಗಡಿ ಕಟ್ಟಿಸುತ್ತಿದ್ದುದನ್ನು ಸೂಚಿಸುತ್ತದೆ.[8]

ಇಂಥ ಹಾಗೂ ಬೇರೆ ಸ್ಥಳದಲ್ಲಿ ಅಂಗಡಿ ಕಟ್ಟಿಸಿ ಆ ಕಟ್ಟಡಗಳನ್ನು ಜಿನಾಲಯ ಅಥವಾ ದೇವಾಲಯಕ್ಕೆ ದಾನವಾಗಿ ನೀಡಿದರೆ ಪುಣ್ಯ ಪ್ರಾಪ್ತಿಯಾವುದೆಂದು ಜನ ಭಾವಿಸಿದಂತೆ ಕಾಣಿಸುತ್ತದೆ.

ಅಂಗಡಿಗಳಲ್ಲಿ 1) ಸಾಮಾನ್ಯ ಅಂಗಡಿ 2) ಬಯಲು ಅಂಗಡಿ 3) ಧರ್ಮದ ಅಂಗಡಿ 4) ದೇವರ ಅಂಗಡಿ 5) ಮಾನ್ಯದ ಅಂಗಡಿ ಇತ್ಯಾದಿ ಪ್ರಬೇಧಗಳು ಕಂಡುಬರುತ್ತವೆ. ಇವುಗಳಲ್ಲಿ ಧರ್ಮದ ಅಂಗಡಿ, ದೇವರ ಅಂಗಡಿ, ಮಾನ್ಯ ಅಂಗಡಿಗಳಿಗೆ ಕರ ವಿನಾಯಿತಿಯಿದ್ದಿತು ಅಂಗಡಿಗಳ ಮೇಲೆ ಅಂಗಡಿ ಅಧಿಕಾರಿಯಿದ್ದನು.[9] ಈತನು ಅಂಗಡಿಯಿಂದ ದೇವಾಲಯಗಳಿಗೆ ಸಲ್ಲಬೇಕಾದ ವಸ್ತುಗಳನ್ನು ಪಡೆಯುವ ಮೇಲ್ವಿಚಾರಣೆ ಮಾಡುತ್ತಿದ್ದನು. ಅಂಗಡಿಗಳಿಗೆ ವ್ಯಕ್ತಿಯ ಹೆಸರನ್ನು ಇಡುತ್ತಿದ್ದರು. ಈ ಮಾತಿಗೆ ಚಂದ್ರಮೌಳಿಯಣ್ಣ ನಂಗಡಿ[10] ಬೊಮ್ಮಲ ದೇವಿಯರಂಗಡಿ[11] ಕೇತಲ ದೇವಿಯರಂಗಡಿ[12] ಬೊಪ್ಪದೇವನ ಬಸದಿಯಂಗಡಿ[13] ಗುಮ್ಮೇಶ್ವರದಂಗಡಿ[14] ಗಳು ಉದಾಹರಣೆ ಗಳೆನಿಸಿದೆ. ಇವು ಅಂಗಡಿ ಕಟ್ಟಿಸಿದ ಅವುಗಳ ಒಡೆತನ ಪಡೆದ ಇಲ್ಲವೆ ಅವುಗಳನ್ನು ದಾನವಾಗಿ ನೀಡಿದ ವ್ಯಕ್ತಿಗಳ ಹೆಸರುಗಳಾಗಿರ ಬೇಕೆನಿಸುತ್ತದೆ.

## 8.8 ಶ್ರವಣಬೆಳಗೊಳದ ಕಲೆ ಮತ್ತು ವಾಸ್ತುಶಿಲ್ಪ

ಶ್ರವಣ ಬೆಳಗೊಳದ ದೇವಾಲಯಗಳು ಹೆಚ್ಚು ಹೆಚ್ಚು ಯಾತ್ರಿಕರನ್ನು ಹನ್ನೆರಡನೇ ಶತಮಾನದ ಸುಮಾರಿಗೆ ಜನರನ್ನು ಆಕರ್ಷಿಸಲು ತೊಡಗಿದವು. ಅಂದಿನಿಂದಲೇ ಈ ಪಟ್ಟಣದ ಬೆಳವಣಿಗೆ ಪ್ರಾರಂಭವಾಯಿತು. ಇಲ್ಲಿ ಕಟ್ಟಿಸಿದ ದೇವಾಲಯಗಳನ್ನು ಪೋಷಿಸಲು ಮತ್ತು ರಕ್ಷಿಸಲು ಕೊಟ್ಟ ದಾನದತ್ತಿಗಳನ್ನು ಕಾಪಾಡಿಕೊಂಡು ಬರಲು, ಮಂದಿರಗಳಲ್ಲಿ ಪೂಜೆ ಪ್ರಾರ್ಥನೆ ಸಲ್ಲಿಸಲು

ನೂರಾರು ಜನರ ದುಡಿಮೆ ಅವಶ್ಯಕವೆನಿಸಿರಬೇಕು. ಅವರಲ್ಲಿ ಹಲವರು ಪುರೋಹಿತರಾಗಿದ್ದರೆ ಉಳಿದವರು ಕೃಷಿಕ, ಬಡಗಿ, ಕಮ್ಮಾರ, ವ್ಯಾಪಾರ ಹಾಗೂ ಕುಶಲ ಕಲೆಯಲ್ಲಿ ಪರಿಣತಿ, ಪಡೆದವರಿದ್ದರು. ಬೆಳವ ಜನ ವಾಸದ ಪ್ರಮುಖ ಅವಶ್ಯಕತೆ, ನೀರಿನ ಸೌಕರ್ಯ ದೇವಾರ್ಚನೆಗೆ ಕೃಷಿಗೆ ಹಾಗೂ ಜನರ ನಿತ್ಯ ಸೌಕರ್ಯಕ್ಕೆ ಅದು ಅನಿವಾರ್ಯ ಹನ್ನೆರಡನೆಯ ಶತಮಾನದಲ್ಲಿ ಇಲ್ಲಿ ತೋಡಿಸಿದ, ಕಟ್ಟಿಸಿದ ಅನೇಕ ಚಿಕ್ಕ-ದೊಡ್ಡ ಕೆರೆ-ಕಟ್ಟೆಗಳು ಈ ಅವಶ್ಯಕತೆಯನ್ನು ಸಮರ್ಪಕವಾಗಿ ಪೂರೈಸಿದವು. ಈ ಶತಮಾನದ ಪ್ರಾರಂಭದಲ್ಲಿ ಜಕ್ಕಿ ಮವ್ವೆ ಕಟ್ಟಿಸಿದ, ಜಕ್ಕಿಕಟ್ಟೆ ಇವುಗಳಲ್ಲಿ ಮೊದಲನೆಯದು, ಗಂಗರಾಜನ ಅತ್ತಿಗೆಯಾದ ಜಕ್ಕಿಮವ್ವೆ ಈ ನಗರದ ಅಡಿಪಾಯ ಹಾಕಲು ಪರೋಕ್ಷವಾಗಿ ಕಾರಣಗಳಾದಳು.[15]

ಒಂದು ಗ್ರಾಮ ಸ್ಥಾಪನೆಯ ಅಂಗವಾಗಿ ಮಧ್ಯಯುಗದಲ್ಲಿ ಕೆರೆ ಹಾಗೂ ದೇವಾಲಯಗಳನ್ನು ಕಟ್ಟಿಸುವ ವಾಡಿಕೆ ಇತ್ತು. ಬೆಳ್ಗೊಳ ನಗರದ ಬೆಳವಣಿಗೆಯಲ್ಲಿಯೂ ಈ ಅಂಶ ಎದ್ದು ಕಾಣುವುದು. ಭಂಡಾರ ಬಸ್ತಿಯನ್ನು ಕಟ್ಟಿಸಿದ ಹುಳ್ಳರಾಜನು ಎರಡು ವಾಸಯೋಗ್ಯ ವಾದ ಮನೆಗಳನ್ನು ಕಟ್ಟಿಸಿ, ವಸತಿ ಆರಂಭಿಸಿದನು. ಈ 'ಜನವಾಸ'ಗಳು ಬಹುಶ ಅಗ್ರಹಾರದ ಮನೆಗಳನ್ನು ಹೋಲುತ್ತಿರಬೇಕು. ಈ ನಿವಾಸಗಳು ಇಲ್ಲವೇ ಸುತ್ತಮುತ್ತಲ ಭಾಗ ಇಂದಿನ ಮಠ ಪ್ರದೇಶವಾಯಿತೆಂದು ತೋರುವುದು. ಚಾರುಕೀರ್ತಿದೇವರ ಮುನಿಸಂತತಿಯ ಇತಿಹಾಸವು ಹನ್ನೆರಡನೇ ಶತಮಾನಕ್ಕಿಂತ ನೂರಾರು ವರ್ಷ ಹಿಂದ ಹೋಗಲು ಸಾಧ್ಯ ಆದರೆ ಈ ಮಠದ ಮುಖ್ಯಸ್ಥರಾಗಿ ಈ ಕ್ಷೇತ್ರದ ಜೀವಾಳವಾಗಿ ಅವರು ಇತಿಹಾಸದಲ್ಲಿ ಹೆಜ್ಜೆ ಇಟ್ಟ ಗುರುತು ಹನ್ನೆರಡನೇಯ ಶತಮಾನದಲ್ಲಿ ಮಾತ್ರ ಸಿಗುವುದು.

ಬಸದಿಗಳನ್ನು ಕಟ್ಟಿಸಿದ ಪ್ರದೇಶವನ್ನು ಆಧಾರವಾಗಿಟ್ಟುಕೊಂಡು ನಗರವು ಬೆಳೆದ ಜಾಡನ್ನು ಸುಲಭವಾಗಿ ಗುರುತಿಸಬಹುದು. ದೊಡ್ಡ ಬೆಟ್ಟದ ಬಲಬುಡದಲ್ಲಿ ಸ್ಥಾಪನೆಯಾದ, ಭಂಡಾರ ಬಸ್ತಿಯಿಂದ ಪ್ರಾರಂಭಗೊಂಡು, ಉತ್ತರ ಮುಖವಾಗಿ ಬೆಳೆದು ಬೆಳ್ಗೊಳ ಗ್ರಾಮವು ಚಿಕ್ಕ ಬೆಟ್ಟದ ದಕ್ಷಿಣ ಪೂರ್ವದ ಅಂಚನ್ನು ಮುಟ್ಟಿತು. ಭಂಡಾರ ಬಸ್ತಿ (1159) ಅಕ್ಕನ ಬಸ್ತಿ (1121) ಗಳು ಅಂದಿನ ನಗರದ ಎರಡು ಗಡಿಗಳಾಗಿದ್ದವು.

ಇಂದಿಗೂ ಈ ಹಗ್ಗುರುತನ್ನು ಬೆಳ್ಗೊಳ ನಗರ ಉಳಿಸಿಕೊಂಡು ಬಂದಿದೆ ಭಂಡಾರ ಬಸ್ತಿಯ ದ್ವಾರದಿಂದ ಹೊರಹೊಮ್ಮುವ ರಸ್ತೆ ನಗರ ಜಿನಾಲಯ ಕ್ರಿ.ಶ. (1159) ಮಾಂಗಾಯಿ ಬಸ್ತಿ (ಕ್ರಿ.ಶ. 14ನೇ ಶತಮಾನ) ಯ ಮೂಲಕ ಸಾಗಿ ಅಕ್ಕನ ಬಸ್ತಿಯನ್ನು ಸೇರುವುದು, ಹನ್ನೆರಡನೇಯ ಶತಮಾನದ ನಿವಾಸಿಗಳು ತಮ್ಮ ಮನೆಗಳನ್ನು ಭಂಡಾರ ಬಸ್ತಿಯಿಂದ ಪಶ್ಚಿಮಕ್ಕೆ ಕಟ್ಟಲಿಷ್ಟ ಪಡದೆ ಬಸದಿಗಳ ಸುತ್ತಲೂ ನಿರ್ಮಿಸಿಕೊಂಡದ್ದು ಸ್ಪಷ್ಟವಾಗುತ್ತದೆ. ಚಿಕ್ಕಬೆಟ್ಟದ ಆಚೆ ಬದಿಯಲ್ಲಿ ಬೆಳೆದ ಜಿನನಾಥಪುರವೆಂಬ ಚಿಕ್ಕ ಹಳ್ಳಿಯ ಇದೇ ಕಾಲದಲ್ಲಿ ಸ್ಥಾಪಿತವಾಯಿತು. ಕ್ರಿ.ಶ. 1117ರಲ್ಲಿ (ಗಂಗರಾಜನ ಸೋದರನ ಮಗ) ಹಿರಿ ಏಚಿಮಯ್ಯನು ಸ್ಥಾಪಿಸಿದ ಬಸ್ತಿಯಿಂದ ಇದರ ಪ್ರಾರಂಭವಾಯಿತು. ಜಿನನಾಥಪುರವು ತನ್ನಮೂಲ ಸ್ವರೂಪವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಪೂರ್ವ ದಿಕ್ಕಿನಲ್ಲಿರುವ ಅರೆಗಲ್ಲ (1117 ಬಸ್ತಿ ಹಾಗೂ) ಪಶ್ಚಿಮ ಅಂಚಿನಲ್ಲಿರುವ ಶಾಮತಿನಾಥ ಬಸ್ತಿ (ಸುಮಾರು ಕ್ರಿ.ಶ. 1200) ಗಳ ಮಧ್ಯೆ ಜಿನನಾಥಪುರವು ಅಂದು ಇದ್ದಂತೆ ಇಂದಿಗೂ ಇದೆ. ಭಂಡಾರ ಬಸದಿಯಿಂದ ಪ್ರಾರಂಭವಾಗುವ ರಸ್ತೆಯು, ಅಕ್ಕನ ಬಸದಿಯಿಂದ ಮುಂದೆ ಸಾಗಿ ನಮ್ಮನ್ನು ಜಿನನಾಥಪುರದ ಅರೆಗಲ್ಲ ಬಸದಿ ಹಾಗೂ ಶಾಂತೀಶ್ವರ ಬಸದಿಗೆ ಕೊಂಡೊಯ್ಯುವುದು.

ಬಸದಿಗಳ ಸಂಖ್ಯೆ ಹೆಚ್ಚಿದರೂ, ಗ್ರಾಮ ಬೆಳೆದರೂ, ಬೆಳ್ಗೊಳದ ಮೂಲ ಸ್ವರೂಪ ಈ ಶತಮಾನದ ಮಧ್ಯಭಾಗದವರೆಗೂ ಬದಲಾಗಲಿಲ್ಲ. ಅಕ್ಕನ ಬಸ್ತಿಯ ವಿಭಾಗವಾದ ಸಿದ್ಧಾಂತ ಬಸ್ತಿಯು ಹನ್ನೆರಡನೇ ಶತಮಾನದ ಕಟ್ಟಡ, ಅಕ್ಕನ ಬಸ್ತಿ, ನಗರ ಜಿನಾಲಯದ ಮಧ್ಯದಲ್ಲಿರುವ ಮಾಂಗಾಯಿ ಬಸ್ತಿಯನ್ನು ಕ್ರಿ.ಶ. 1327 ರಲ್ಲಿ ನಿರ್ಮಿಸಲಾಯಿತು. ಇದು ರಸ್ತೆಯು ಪಶ್ಚಿಮ ಅಂಚಿನಲ್ಲಿದೆ. ಇಂದಿರುವ ಸ್ಥಳದಲ್ಲಿ ಜೈನಮಠದ ಮೂಲಕಟ್ಟಡ ನಿಂತಿರಲು ಸಾಧ್ಯ. ಆದರೆ ಪೂರ್ಣ ಜೀರ್ಣೋದ್ಧಾರಗೊಂಡಿರುವ ಇಂದಿನ ಮಠದ ಅತ್ಯಂತ ಪುರಾತನ ವಾಸ್ತು ವಿಭಾಗವು ಹದಿನೇಳನೇ ಶತಮಾನಕ್ಕಿಂತ ಹಿಂದೆ ಹೋಗದು ಇಂದಿನ ಮಠದ ಕೆಲಭಾಗ ದಾನಶಾಲೆ ಬಸ್ತಿ, ಕಲ್ಯಾಣಿ, ಭಂಡಾರ ಬಸತಿಯ ಹೊರಕೋಟೆ ಮತ್ತು ಅದರ ಎದುರು ನಿಂತಿರುವ ಮಾನಸ್ತಂಭಗಳು, ಹದಿನೇಳನೇ ಶತಮಾನದಿಂದೀಚಿನ ವಾಸ್ತು ಲಕ್ಷಣಗಳನ್ನು ಹೊಂದಿದೆ. ಅಂದರೆ ಭಂಡಾರ ಬಸ್ತಿ ಅಕ್ಕನ ಬಸ್ತಿಯ ಮಧ್ಯೆ ಪ್ರದೇಶದಲ್ಲಿ ಬೆಳೆದು ಬಹುಕಾಲ ಈ ಪರಿಮಿತಿಯಲ್ಲಿಯೇ ಇದ್ದ ಬೆಳ್ಗೊಳ ನಗರವು ಹದಿನೇಳನೇ ಶತಮಾನದಿಂದೀಚೆಗೆ ಪಶ್ಚಿಮ ಮುಖವಾಗಿ ಎರಡು ಬೆಟ್ಟಗಳ ನಡುವೆ ಬೆಳೆಯತೊಡಗಿತೆಂದು ಭಾವಿಸಬಹುದು.

**ಸವತಿ ಗಂಧವಾರಣ ಬಸ್ತಿ**

ಶ್ರವಣ ಬೆಳಗೊಳದ ಚಿಕ್ಕಬೆಟ್ಟದಲ್ಲಿ ವಿಷ್ಣುವರ್ಧನನ ರಾಣಿ ಶಾಂತಲೆ ಶಾಂತಿ ಜಿನನಿಗಾಗಿ ಕ್ರಿ.ಶ. 1123ರಲ್ಲಿ ನಿರ್ಮಾಣ ಮಾಡಿಸಿದ ಬಸದಿಗೆ 'ಸವತಿಗಂಧವಾರಣ' ಬಸದಿ ಎಂದು ಹೆಸರಾಗಿದೆ. ನಿರ್ಮಾಣ ಕುರಿತ ಶಾಸನದಲ್ಲಿ[16] ನೀ ಹೆಸರು ಸೂಚಿತವಾಗಿಲ್ಲವಾದರೂ ಇದೇ ಬಸದಿಯ ಇನ್ನೊಂದು ದೀರ್ಘ ಶಾಸನದಲ್ಲಿ[17] ಅದರ ನಲವತ್ತೊಂಬತ್ತನೆಯ ಸಾಲಿನಲ್ಲಿ 'ಸವತಿ ಗಂಧ ಹಸ್ತಿ ಬಸದಿ' ಎಂದು ಐವತ್ತನೆಯ ಸಾಲಿನಲ್ಲಿ 'ಸವತಿ ಗಂಧವಾರಣ' ಬಸದಿ ಎಂದೂ ಆ ಹೆಸರು ಸೂಚಿತವಾಗಿರುವುದು ಕಾಣುತ್ತದೆ. ಇದೇ ಶಾಸನದಲ್ಲಿಯೇ ಇನ್ನು ಸ್ವಲ್ಪ ಮೊದಲಲ್ಲಿ ಸಾಲು ಮೂವತ್ತೊಂಭತ್ತರಲ್ಲಿ ಆಕೆಯನ್ನು 'ಉದ್ವೃತ್ತ ಸವರಿಗಂಧವಾರಣೆ' ಎಂಬುದಾಗಿ ಹೇಳಿದೆ. ವಿಷ್ಣುವರ್ಧನನ ಬೇಲೂರು ಶಾಸನದಲ್ಲಿ ಆಕೆಯನ್ನು ಕುರಿತ ನಾಮಾವಳಿಯಲ್ಲಿ ಇದೇ ಮಾತು 'ಸವತಿಗಂಧ ಹಸ್ತಿ' ಎಂಬುದಾಗಿದೆ. ಇದನ್ನು ಗಮನಿಸಿದಾಗ ಆಕೆಯ ಈ ಬಿರುದು ಕಾರಣವಾಗಿ ಆಕೆ ನಿರ್ಮಾಣ ಮಾಡಿಸಿದ ಬಸದಿಗೆ ಅದಕ್ಕೆ ಅನುಗುಣವಾದ ಹೆಸರು ಬಂದಿರುವುದು ಸಹಜವೇ ಆಗಿದೆ ಎನ್ನಬಹುದು.[18]

ಕನ್ನಡ ಸಾಹಿತ್ಯದಲ್ಲಿ 'ಗಂಧವಾರಣ' ಎಂಬ ನಾತು ಸೇರಿದ ಇನ್ನು ಕೆಲವು ಬಿರುದುಗಳಿವೆ. ಇವುಗಳಲ್ಲಿ 'ಅಮ್ಮನ ಗಂಧ ವಾರಣಂ' ಎಂಬುದಕ್ಕೆ ಸ್ವಲ್ಪ ಪ್ರಚಾರ ಹೆಚ್ಚು ಪಂಪ ಕವಿಯು (1941) ವಿಕ್ರಮಾರ್ಜುನ ವಿಜಯದಲ್ಲಿ ಅರ್ಜುನ ಹುಟ್ಟಿದಾಗ ಆತನಿಗೆ ಹಲವು ಹೆಸರುಗಳನ್ನಿಡುತ್ತ 'ಅಮ್ಮನ ಗಂಧ ವಾರಣಂ' ಎಂಬುದಾಗಿಯೂ ಒಂದು ಹೆಸರನ್ನು ಇಡಲಾಯಿತೆಂದು ಬಣ್ಣಿಸಿದೆ.

ಶೈವನಾದ ಮಾರಸಿಂಗನಿಗೂ ಜಿನಭಕ್ತಳಾದ ಮಾಚಿಕಬ್ಬೆಗೂ ಜನಿಸಿದ ಶಾಂತಲೆಯು ಸರ್ವಧರ್ಮ ಸಮನ್ವಯವನ್ನು ಹುಟ್ಟಿನಿಂದಲೇ ಸಿದ್ದಿಸಿಕೊಂಡವಳು ಬೇಲೂರಿನಲ್ಲಿ ವಿಷ್ಣು ದೇವಾಲಯವನ್ನು ಬೆಳ್ಗೊಳದಲ್ಲಿ ಜಿನ ದೇವಾಲಯವನ್ನು ಕಟ್ಟಿಸಿ ಪವಿತ್ರ ಸ್ಥಳವಾದ ಶಿವಗಂಗೆಯಲ್ಲಿ ಶಾಂತಲೆ ಮರಣ ಹೊಂದಿದಳು.[19]

ಸಿಂಹ ಪೀಠದ ಮೇಲೆ ಪರ್ಯಾಕಾಸನದಲ್ಲಿ ಕುಳಿತ (34) ವಿಗ್ರಹವು ಹದಿನಾರನೆಯ ತೀರ್ಥಂಕರನಾದ ಶಾಂತಿನಾಥನದು. ಅಂತರಾಳದಲ್ಲಿರುವ ಮತ್ತಳಿಗಳು ಸರ್ವಾಹ್ಣ ಹಾಗೂ

ಅಂಬಿಕೆಯರವು ನವರಂಗದಲ್ಲಿರುವ ಚಕ್ಕದುಂಡಾದ, ಕಂಬಗಳಿಗೂ ಸಾಂಪ್ರದಾಯಿಕ ಹೊಯ್ಸಳ ಕಂಬಗಳಿಗೂ ಇರುವ ಭಿನ್ನತೆ ಸುಲಭವಾಗಿ ಎದ್ದು ಕಾಣುವುದು ಈ ಬಸದಿಯ ಶಿಖರವು ಚಾವುಂಡರಾಯ ಬಸ್ತಿಯ ಶಿಖರವನ್ನು ಸ್ಥೂಲವಾಗಿ ಹೋಲುವುದು ಆದರೆ ಮೇಲಿಂದ ಮೇಲೆ ಜೀರ್ಣೋದ್ಧಾರಗೊಂಡ ಈ ಕಟ್ಟಡವು ತನ್ನ ಮೂಲ ಆಕರ್ಷಣೆಯನ್ನು ಕಳೆದುಕೊಂಡಿದೆ.

**ತೇರಿನ ಬಸದಿ**

ದೇವಾಲಯದ ಮುಂದಿರುವ ತೇರಿನಾಕಾರದ ಬಲಿಪೀಠದಿಂದ ಇದಕ್ಕೆ ತೇರಿನ ಬಸ್ತಿ ಎಂಬ ಹೆಸರು ಬಂದಿದೆ. ಸವತಿ ಗಂಧವಾರಣ ಬಸ್ತಿಯ ಬಲಕ್ಕಿರುವ ಈ ಕಟ್ಟಡವನ್ನು ರಾಜಶ್ರೇಷ್ಠಿಗಳಾದ ಪೊಯ್ಸಳಶೆಟ್ಟಿ, ನೇಮಿಸೆಟ್ಟಿಯವರ ಮಾತೆಯರಾದ ಮಾಚಿಕಬ್ಬೆ ಹಾಗೂ ಶಾಂತಿಕಬ್ಬೆಯರು ಕ್ರಿ.ಶ. 1117 ರಲ್ಲಿ ನಿರ್ಮಿಸಿದರು. ಬಾಹುಬಲಿ ತೀರ್ಥಂಕರನಾಗಿರದೆ ಒಬ್ಬ ಕೇವಲಿಯಾಗಿದ್ದ ಅವನನ್ನು ಪೂಜಾರ್ಹನೆಂದು ಪರಿಗಣಿಸಿ ಅವನಿಗೆ ದೇವಾಲಯವನ್ನು ಕಟ್ಟಿಸಿದ ಅಪರೂಪ ನಿದರ್ಶನವಿದು.[20]

ಇಲ್ಲಿ ಗರ್ಭಗುಡಿ,ಸುಕನಾಸಿ ಮತ್ತು ನವರಂಗಗಳಿವೆ ಬಾಹುಬಲಿ ವಿಗ್ರಹ ಸುಮಾರು ಐದಡಿ ಎತ್ತರವಿದೆ. ಇದರ ಮುಂದಿರುವ ತೇರಿಗೆ ಮಂದಿರವೆಂದು ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಬೇಧಗಳಿವೆ ಎಂದು ಇದು ಮೇರು ಮಂದರವೆಂದು ಹೇಳಲಾಗಿದೆ. ಇದರ ಸುತ್ತಲೂ ಐವತ್ತೆರಡು ಜಿನ ವಿಗ್ರಹಗಳನ್ನು ಕೆತ್ತಿರುವರು.

**ಶಾಂತೀಶ್ವರ ಬಸದಿ**

ಜಿನನಾಥಪುರದಲ್ಲಿರುವ ಶಾಂತಿನಾಥ ಬಸದಿಯನ್ನು ವಸುದೈಕ ಬಂಧವರೇಚರಸನು, ಸುಮಾರು ಕ್ರಿ.ಶ. 1200 ರಲ್ಲಿ ಕಟ್ಟಿಸಿದನು. ಶ್ರವಣಬೆಳಗೊಳದಲ್ಲಿರುವ ಅಕ್ಕನ ಬಸದಿಯಂತೆಯೇ ಇದು ಸಂಪೂರ್ಣ ಹೊಯ್ಸಳ ಶೈಲಿನಲ್ಲಿ ನಿರ್ಮಾಣವಾಗಿದೆ. ನಕ್ಷತ್ರಾಕಾರದ ಜಗತಿಯ ಮೇಲೆ ಗರ್ಭಗೃಹ, ಸುಕನಾಸಿ, ರಂಗಮಂಟಪಗಳಿವೆ. ನವರಂಗದಲ್ಲಿ ನಾಲ್ಕು ಹೊಯ್ಸಳ ರೀತಿಯ ದುಂಡಾದ ಕಂಬಗಳು, ಮಣಿಸಾಲುಗಳಿಂದ ಅಲಂಕೃತವಾಗಿದೆ. ಮೇಲ್ಭಾವಣೆಯಲ್ಲಿ ಒಂದೂವರೆ ಅಡಿ ಆಳದ ಒಂಭತ್ತು ಭುವನೇಶ್ವರಿಗಳಿವೆ. ಒಂದು ಫಲಕದಲ್ಲಿ ಸಿಂಹ ಮುಖ ಲತೆಗಳು ಮಧ್ಯದಲ್ಲಿ ಅಷ್ಟ ಕೋಣದ ನಕ್ಷತ್ರ, ಅದರ ಮಧ್ಯದಲ್ಲಿ ಮೂರು ಸುತ್ತು ಎಸಳುಗಳುಳ್ಳ ಕಮಲ ಮತ್ತು ಕರ್ಣಿಕೆ ಇದೆ. ನವರಂಗದ ಒಳಗೆ ಎರಡು ಅಲಂಕೃತವಾದ ಗೂಡುಗಳು ಈಗ ಖಾಲಿಯಾಗಿವೆ.[21]

ಗರ್ಭಗುಡಿಯಲ್ಲಿ ಐದೂವರೆ ಅಡಿ ಎತ್ತರದ ವಿಗ್ರಹವಿದ್ದು ಅದರ ಕೆಳಭಾಗದ ಪಟ್ಟಿಕೆಯಲ್ಲಿ ಗಜಾರೂಢನಾದ ಇಂದ್ರನು ಕಲ್ಯಾಣಕಾರ್ಯ ನಿಮಿತ್ತವಾಗಿ ತೆರಳುವ ದೃಶ್ಯವನ್ನು ತುಂಬ ಕಲಾತ್ಮಕವಾಗಿ ಕೆತ್ತಲಾಗಿದೆ. ಶಾಂತಿನಾಥನ ಇಕ್ಕೆಲಗಳಲ್ಲಿರುವ ಚಾಮರದಾರಿಗಳನ್ನು ಆನಮತರ ಸೇರ್ಪಡೆ ಮಾಡಿದಂತೆ ಕಾಣುವುದು. ಬಸದಿಯ ಶಿಖರವು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡು ಈಗ ನೀರಸವಾಗಿ ಕಾಣುತ್ತಿದೆ.[22]

**ಭಂಡಾರಿ ಬಸದಿ**

ಶ್ರವಣ ಬೆಳಗೊಳದ ಅತ್ಯಂತ ದೊಡ್ಡ ಹಾಗೂ ನಗರದಲ್ಲಿ ಸ್ಥಾಪಿತವಾದ ಮೊಟ್ಟ ಮೊದಲ ದೇವಾಲಯ ಭಂಡಾರಿ ಬಸದಿಯಾಗಿದೆ. ಕ್ರಿ.ಶ. 1159ರಲ್ಲಿ ದಂಡನಾಯಕ ಹುಳ್ಳಮಯ್ಯ ಇದನ್ನು ನಿರ್ಮಿಸಿದನು. ಈ ಹುಳ್ಳನು ಹೊಯ್ಸಳ ನರಸಿಂಹನ ಭಂಡಾರಿಯಾಗಿ, ಬೆಳ್ಗೊಳಕ್ಕೆ ವಿಶೇಷ ಸೇವೆ ಸಲ್ಲಿಸಿದನು.

ಮೂಲತಃ 'ಚತುರ್ವಿಂಶತಿ ತೀರ್ಥಂಕರ ಬಸ್ತಿ' ಎಂಬ ಹೆಸರಿನ ಈ ದೇವಾಲಯವನ್ನು 'ಭವ್ಯ ಚೂಡಾಮಣಿ' ಎಂದು ಆಳುವ ಅರಸ ನರಸಿಂಹನು ಕರೆದು, ಹುಳ್ಳ ರಾಜನಿಗಿದ್ದ 'ಸಂಯುಕ್ತ ಚೂಡಾಮಣಿ' ಎಂಬ ಬಿರುದನ್ನು ಪ್ರಸಿದ್ಧಪಡಿಸಿದನು. ಹುಳ್ಳರಾಜನು ಭಂಡಾರಿಯಾಗಿದ್ದುದರಿಂದ ಇದನ್ನು 'ಭಂಡಾರ ಬಸ್ತಿ'ಯೆಂದು ಮುಂದೆ ಕರೆಯಲಾಯಿತು.[23]

ಭಂಡಾರಿ ಬಸದಿಯು ಇನ್ನೂರಿಪ್ಪತ್ತಾರು ಅಡಿ ಉದ್ದ ಎಪ್ಪತ್ತೇಳು ಅಡಿ ಅಗಲವಿದೆ. ಗರ್ಭಗೃಹ, ಸುಕನಾಸಿ, ನವರಂಗ, ಮುಖಮಂಟಪ, ಕೈಸಾಲೆ ಮತ್ತು ಪ್ರಾಕಾರಗಳಿವೆ. ಗರ್ಭಗುಡಿ ಯಲ್ಲಿ ಉದ್ದವಾದ ಪೀಠದ ಮೇಲೆ ಮೂರು ಅಡಿ ಎತ್ತರದ ಇಪ್ಪತ್ತನಾಲ್ಕು ಸ್ಥಾನಕ ಜಿನ ವಿಗ್ರಹಗಳಿವೆ. ಗರ್ಭಗುಡಿಗೆ ಮೂರು ಬಾಗಿಲುಗಳಿವೆ. ಮಧ್ಯದ ಬಾಗಿಲುವಾಡವನ್ನು ಸುಂದರವಾಗಿ ಕೊರೆದಿದೆ. ಬಾಗಿಲುಗಳ ಪಕ್ಕದಲ್ಲಿ ಜಾಲಾಂಧ್ರಗಳಿವೆ. ಮಧ್ಯ ಬಾಗಿಲಿಗೆ ಎದುರಾಗಿ ವಾಸು ಪೂಜ್ಯ, ಇದರ ಬಲಕ್ಕೆ ಎಡಕ್ಕೆ ಹನ್ನೆರಡು ಜಿನ ವಿಗ್ರಹಗಳಿವೆ.[24] ಸುಕನಾಸಿಯ ಎಡಗಡೆಯಲ್ಲಿ ಪದ್ಮಾವತೀ ಬ್ರಹ್ಮ ವಿಗ್ರಹಗಳಿವೆ. ನವರಂಗದ ಮಧ್ಯೆಯಲ್ಲಿ ಹತ್ತು ಚದುರಡಿ ವಿಸ್ತಾರವಾಗಿರುವ ಒಂದೇ ಚಂದ್ರಶಿಲೆ ನಾಲ್ಕು ಕಂಬಗಳ ಮಧ್ಯದಲ್ಲಿದೆ. ಇಂತಹ ಅಖಂಡ ಶಿಲೆಗಳು ಮುಂದಿನ ಭಾಗದಲ್ಲೂ ಇವೆ. ನವರಂಗದ ದ್ವಾರಬಂಧದ ಮೇಲೆ ಪುರುಷಮೃಗ ಲತಾಚಿತ್ರಗಳಿವೆ. ಸುತ್ತಲೂ ಇರುವ

ಶಾಲೆಗೆ ಕಟಾಂಜನವಿದೆ. ದುಂಡಾದ ನಾಲ್ಕಡಿ ಎತ್ತರದ ಕಂಬಗಳಿಗೆ ಎರಡೂವರೆ ಅಡಿ ಅಗಲದ ಎರೆಡೆರಡು ಕಲ್ಲು ಚಪ್ಪಡಿಗಳನ್ನು ಮಧ್ಯೆ ಒಂಭತ್ತಂಗಲ ಅಂತರವಿರುವಂತೆ ಜೋಡಿಸಿರುವರು, ಇಂತಹ ಕಟಾಂಜನ ದಕ್ಷಿಣ ಭಾರತದಲ್ಲಿ ಅಪೂರ್ವವಾದುದು. ಬಸದಿಯ ಮುಂದಿರುವ ಮಾನ ಸ್ತಂಭವು ಏಕಶಿಲೆಯಿಂದ ಮಾಡಿದುದಾಗಿದೆ.

**ಅಕ್ಕನ ಬಸದಿ**

ಈ ಸುಂದರ ದೇವಾಲಯವನ್ನು ಎರಡನೇ ವೀರಬಲ್ಲಾಳನ ಮಂತ್ರಿಯಾದ ಚಂದ್ರಮೌಳಿಯ ಪತಿಯಾದ ಆಚಿಯಕ್ಕ ಕ್ರಿ.ಶ. 1181 ರಲ್ಲಿ ಕಟ್ಟಿಸಿದ್ದರಿಂದ ಇದಕ್ಕೆ ಅಕ್ಕನ ಬಸದಿ ಎಂದು ಹೆಸರು ಬಂದಿತು. ಪಾರ್ಶ್ವನಾಥ ಪೀಠದ ಶಾಸನದಿಂದಲೂ (ಕ್ರಿ.ಶ. ಬೆ. 331) ದೇವಾಲಯದಲ್ಲಿರುವ ಮತ್ತೊಂದು ಸುಂದರವಾದ ಶಾಸನದಿಂದಲೂ (ಶ್ರ. ಬೆ. 327) ಕ್ರಿ.ಶ. 1182ನೆಯ ಚನ್ನರಾಯ ಪಟ್ಟಣದ 150ನೆಯ ಶಾಸನದಿಂದಲೂ ಆಚಿಯಕ್ಕ ಈ ಬಸದಿಯನ್ನು ಕಟ್ಟಿಸಿದಳೆಂದು ಚಂದ್ರ ಮೌಳಿಯು ಎರಡನೇ ಬಲ್ಲಾಳನಿಂದ ದಾನಗಳನ್ನು ಕೊಡಿಸಿದನೆಂದು ತಿಳಿದು ಬರುತ್ತದೆ.[26]

ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ, ಮುಖ ಮಂಟಪಗಳಿವೆ. ಗರ್ಭಗುಡಿಯ ದ್ವಾರವು ಸುಂದರವಾಗಿ ಅಲಂಕೃತವಾಗಿದ್ದು ಒಳಗೆ ಐದಡಿ ಎತ್ತರದ ಪಾರ್ಶ್ವನಾಥ ವಿಗ್ರಹವಿದೆ. ಇದರ ಮೇಲೆ ಏಳು ಹೆಡೆ ಸರ್ಪವಿದೆ. ಸುಕನಾಸಿ ದ್ವಾರದ ಪಕ್ಕಗಳಲ್ಲಿ ಜಾಲಾಂಧ್ರಗಳಿವೆ. ಸುಕನಾಸಿಯಲ್ಲಿ ಧರಣೇಂದ್ರ ಪದ್ಮಾವತಿಯರ ಮೂರ್ತಿಗಳಿವೆ. ಇವು ಮೂರುವರೆ ಅಡಿ ಎತ್ತರವಿದ್ದು ಐದು ಹೆಡೆಯ ಸರ್ಪವನ್ನು ಹೊಂದಿದೆ. ಮೇಲ್ಛಾವಣಿ ಎರಡಡಿ ಆಳವಾಗಿದ್ದು ಒಂಭತ್ತು, ಭುವನೇಶ್ವರಿಗಳನ್ನು ಹೊಂದಿದೆ. ಕಂಬಗಳ ಮೇಲೂ ಭುವನೇಶ್ವರಿಗಳಲ್ಲೂ ಕೆತ್ತನೆ ಕೆಲಸವು ಸುಂದರವಾಗಿದೆ. ಹೊರಗೋಡೆಗಳಲ್ಲಿ ಕಣ್ಣ ಕಂಬಗಳು ಶಿಖರಗಳು ಇವೆ. ಗೋಪುರದ ನಾಲ್ಕು ಕಡೆಗಳ ಮಧ್ಯಭಾಗದಲ್ಲಿ ಮಾತ್ರ ಕೆಲವು ವಿಗ್ರಹಗಳಿವೆ. ಗೋಪುರವು ಬಾಚಿಕೊಂಡಿರುವ ಭಾಗದಲ್ಲಿ ಚಿತ್ರ ಫಲಕವಿದೆ. ಅಂತರಾಳದಲ್ಲಿರುವ ಧರಣೇಂದ್ರ ಯಕ್ಷ ಹಾಗೂ ಪದ್ಮಾವತಿ ಯಕ್ಷಿಯ ವಿಗ್ರಹಗಳು ಭವ್ಯವಾಗಿದೆ.[27] ಮುಂದೆ ಬಾಚಿರುವ ಭಾಗದ ಎರಡು ಪಕ್ಕಗಳಲ್ಲೂ ಸರಸ್ವತಿ ವಿಗ್ರಹಗಳಿವೆ. ಗೋಪುರದ ಮುಂಭಾಗದಲ್ಲಿಯೇ ಕುಳಿತಿರುವ ಜಿನವಿಗ್ರಹ ಮತ್ತೊಂದು ಇದೆ. ಪೀಠದ ಎರಡು ಕಡೆಗಳಲ್ಲಿ ಆನೆಗಳಿವೆ. ದೇವಾಲಯದ ದಕ್ಷಿಣ ಗೋಡೆಯು ಕುಸಿದಿರುವುದರಿಂದ ಒದೆಗಲ್ಲುಗಳನ್ನು ಕೊಡಲಾಗಿದೆ.

**ನಗರ ಜಿನಾಲಯ**

ಶ್ರವಣಬೆಳಗೊಳದಲ್ಲಿರುವ ಸಣ್ಣದಾದ ನಗರ ಜಿನಾಲಯವನ್ನು 2ನೇ ಬಲ್ಲಾಳನ ಪಟ್ಟಣ ಸ್ವಾಮಿಯಾದ ನಾಗದೇವನು ಕ್ರಿ.ಶ. 1195 ನಿರ್ಮಿಸಿದನು. ಇದಕ್ಕೆ ಶ್ರೀನಿಲಯ ಎಂಬ ಹೆಸರು ಇದ್ದಿತು. ಊರಿನ ವ್ಯಾಪಾರಿಗಳು ದಾನಗಳನ್ನು ಕೊಟ್ಟಿರುವುದರಿಂದ ನಗರ ಜಿನಾಲಯ ಎಂಬ ಹೆಸರು ಬಂದಿತು.[28] ಗರ್ಭಗುಡಿಯಲ್ಲಿ ಎರಡೂವರೆ ಅಡಿ ಗರ್ಭ, ಗೃಹ, ಸುಕನಾಸಿ ನವರಂಗಗಳಿವೆ. ಎತ್ತರದ ಸ್ಥಾನಕ ಆದಿನಾಥ ವಿಗ್ರಹವಿದೆ. ನವರಂಗದ ಎಡಗಡೆ ಕೋಣೆಯಲ್ಲಿ ಎರಡಡಿ ಎತ್ತರದ ನಿಂತಿರುವ ಬ್ರಹ್ಮದೇವ ವಿಗ್ರಹವಿದೆ. ಎಡಗೈಯಲ್ಲಿ ಫಲ, ಬಲಗೈಯಲ್ಲಿ ಚಾವಟಿ ಹಿಡಿದು ಪಾದರಕ್ಷೆಗಳನ್ನು ಧರಿಸಿರುವವನು. ಪೀಠದಲ್ಲಿ ಕುದುರೆ ಇದೆ. ಕ್ರಿ.ಶ. 1342 ನೆಯ ಒಂದು ಶಾಸನವು (ಶ್ರ.ಬೆ.258) "ಪಂಡಿತಯತಿ" ಯ ತಪಃ ಪ್ರಭಾವದಿಂದ ನಗರ ಜಿನಾಲಯವಾಯಿತೆಂದು ಹೇಳುವುದು.

**ಹಳೇ ಬೆಳಗೊಳದ ಪಾರ್ಶ್ವನಾಥ**

ಶ್ರವಣಬೆಳಗೊಳಕ್ಕೆ ನಾಲ್ಕು ಮೈಲಿ ಉತ್ತರದಲ್ಲಿ ಹಳೆ ಬೆಳಗೊಳವಿದೆ. ಇದರಲ್ಲಿ 'ಹೊಯ್ಸಳ' ರೀತಿಯ ಪಾರ್ಶ್ವನಾಥ ಬಸದಿ ಇದೆ. ಗರ್ಭಗುಡಿಯಲ್ಲಿ ನಿಂತಿರುವ ಎರಡೂವರೆ ಅಡಿ ಎತ್ತರದ ಜಿನವಿಗ್ರಹವಿದೆ. ಸುಕನಾಸಿಯ ಗೋಡೆಗೆ ಸೇರಿರುವ ಭಗ್ನವಾದ ಐದಡಿ ಎತ್ತರದ ಪಾರ್ಶ್ವನಾಥ ಸ್ಥಾನಕ ಮೂರ್ತಿ ಬಹುಶಃ ಮೂಲ ವಿಗ್ರಹವಾಗಿದ್ದಿತು.[29]

ಪಾರ್ಶ್ವನಾಥನ ಹಿಂದೆ ಸರ್ಪದ ಸುರುಳಿ ಮೇಲೆ ಏಳು ಹೆಡೆಗಳ ಛತ್ರ ಇದೆ. ನವರಂಗದ ಭುವನೇಶ್ವರಿ ಸುಂದರವಾಗಿದೆ. ಎಂಟು ದಿಕ್ಕುಗಳಲ್ಲೂ ಅಷ್ಟದಿಕ್ಪಾಲಕರು ಪರಿವಾರದವರು ಇರುವರು. ಮಧ್ಯದಲ್ಲಿ ಐದು ಹೆಡೆಗಳ ಕೆಳಗೆ ಧರಣೇಂದ್ರನು ಎಡಗೈಯಲ್ಲಿ ಧನಸ್ಸು ಬಲಗೈಯಲ್ಲಿ ಶಂಖವನ್ನು ಹಿಡಿದಿರುವನು. ಸುಮಾರು ಮೂರು ಅಡಿ ಎತ್ತರದ ಆಸೀನ ಜಿನವಿಗ್ರಹ ಇದೆ. ದೇವಾಲಯದ ಜಗತಿಯ ಮೂಲೆಗಳಲ್ಲಿ ಆನೆಗಳಿವೆ.[30] ಈ ದೇವಾಲಯದಲ್ಲಿರುವ ಶಾಸನದಿಂದ (ಎ.ಕ.5 ಚೆ.ರಾ ಪ 148) ಕ್ರಿ.ಶ. 1094 ರಲ್ಲಿ ವಿಷ್ಣುವರ್ಧನನ ತಂದೆಯಾದ ಎರೆಯಂಗನು ಗೋಪನಂದಿಗೆ ರಾಚನಹಳ್ಳ ಮತ್ತು ಬೆಳಗೊಳ 12ನ್ನು ಬೆಳಗೊಳದ ಬಸದಿಗಳ ಜೀರ್ಣೋದ್ಧಾರ ಕ್ಕಾಗಿ ಕೊಟ್ಟನೆಂದು ತಿಳಿದು ಬರುತ್ತದೆ. ಆದುದರಿಂದ ಕ್ರಿ.ಶ. 1094 ರಲ್ಲಿಯೇ ಈ ದೇವಾಲಯ ವಿದ್ದಿರಬೇಕು.

## ಅಧ್ಯಾಯ ಎಂಟರ ಅಡಿಟಿಪ್ಪಣಿಗಳು

1) ಕನ್ನಡ ವಿಷಯ ವಿಶ್ವಕೋಶ 1979 ಪು 1048
2) ಕೆ.ವೀರತ್ತಪ್ಪ – ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಶ್ರವಣಬೆಳ್ಗೊಳ, 1981 ಪು.9
3) ಶ್ರವಣಬೆಳ್ಗೊಳ ಪ್ರಾಚೀನ ವಸ್ತುಶೋಧನ ಶಾಖೆಯ ಪ್ರಕಟಣೆ ಮೈಸೂರು 1957 ಪು 2
4) ಶೆಟ್ಟರ್ – ಮೈಸೂರು ಬೆಳ್ಗೊಳ ನಗರ ಹಾಗೂ ಜಿನನಾಥಪುರ ಪರಿಚಯ, ಪು 59
5) ಎಂ.ಚಿದಾನಂದಮೂರ್ತಿ – ಸಾಂಸ್ಕೃತಿ ಕೇಂದ್ರವಾಗಿ ಶ್ರವಣಬೆಳಗೊಳ 1981 ಪು 20
6) ಎಂ.ಚಿದಾನಂದಮೂರ್ತಿ – ಅದೇ 1981 ಪು 24
7) ಎಂ.ಚಿದಾನಂದಮೂರ್ತಿ – ಅದೇ 1981 ಪು 28
8) ಎ.ಕ. 2 ಶ್ರವಣಬೆಳ್ಗೊಳ ಶ್ರವಣಬೆಳ್ಗೊಳ ಕ್ರಿ.ಶ. 1181
9) ತು.ನಾ.ಶಾ. ನಂ. 36 ಮಂಗಳೂರು ಮಂಗಳೂರು ಬೆಳ್ಗೊಳ ಕ್ರಿ.ಶ. 1204
10) ಎ.ಕ. 4 ತರೀಕೆರೆ 45 ಅಮೃತಾಪುರ. ಕ್ರಿ.ಶ. 1192
11) ಎ.ಕ.4 ತರೀಕೆರೆ 45 ಅಮೃತಾಪುರ ಕ್ರಿ.ಶ. 1196
12) ಎ.ಕ. ತರೀಕೆರೆ 45 ಅಮೃತಾಪುರ ಕ್ರಿ.ಶ. 1196
13) ಎ.ಕ. 4 ತರೀಕೆರೆ 45 ಅಮೃತಾಪುರ ಕ್ರಿ.ಶ. 1196
14) ಎ.ಕ. 4 ತರೀಕೆರೆ 45 ಅಮೃತಾಪುರ ಕ್ರಿ.ಶ. 1196
15) ಶೆಟ್ಟರ್ – ಶ್ರವಣಬೆಳಗೊಳ ಪು 59
16) ಎ.ಕ. 11–162, 131
17) ಎ.ಕ. 11–162, 131
18) ಶೆಟ್ಟರ್ – ಅದೇ ಪು 29
19) ಶೆಟ್ಟರ್ – ಅದೇ ಪು 30
20) ಶ್ರೀಕಂಠಶಾಸ್ತ್ರೀ ಎಸ್. – ಹೊಯ್ಸಳ ವಾಸ್ತುಶಿಲ್ಪ 1965 ಪು 215
21) ಷ.ಶೆಟ್ಟರ್ – ಶ್ರವಣಬೆಳ್ಗೊಳ ಪು 31
22) ಷ.ಶೆಟ್ಟರ್ – ಅದೇ ಪು 61
23) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪು 61
24) ಶ್ರೀಕಂಠಶಾಸ್ತ್ರಿ ಎಸ್ – ಅದೇ ಪು 213 214

25) ಶೆಟ್ಟರ್ – ಅದೇ ಪು 66

26) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪು 214

27) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪು 218

28) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪು 219

29) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪು 230

## ಅಧ್ಯಾಯ ೨
## ಉಪಸಂಹಾರ

ಪ್ರಸ್ತುತ ನಗರ ಕೇಂದ್ರಗಳ ಅಧ್ಯಯನವು ಹೊಯ್ಸಳ ಸಾಮ್ರಾಜ್ಯದ ಸುಮಾರು ಕ್ರಿ.ಶ. ಹತ್ತರಿಂದ ಹದಿಮೂರನೇ ಶತಮಾನದಲ್ಲಿನ ವಿಶೇಷವಾಗಿ ಕರ್ನಾಟಕಕ್ಕೇ ಸಂಬಂಧಿಸಿದಂತೆ ನಗರೀಕರಣದ ಪ್ರಮುಖ ಅಂಶಗಳನ್ನು ಒಳಗೊಂಡಿದೆ. ಹಲವು ಮುಖಗಳಾದ ಪಟ್ಟಣಗಳ ಹುಟ್ಟು ಹಾಗೂ ಬೆಳವಣಿಗೆ ಹಾಗೂ ರಚನೆ ಮತ್ತು ಪಟ್ಟಣಗಳಲ್ಲಿನ ಆಡಳಿತ, ಆರ್ಥಿಕ ಹಾಗೂ ಸಾಮಾಜಿಕ ಜೀವನಗಳನ್ನು ಅಧ್ಯಯನ ಮಾಡಲಾಗಿದೆ. ಪಟ್ಟಣಗಳು ಹಳ್ಳಿಗಳಿಗಿಂತ ಭಿನ್ನವಾಗಿದ್ದವು ಹಾಗೂ ಹಳ್ಳಿಗಳಿಗೆ ಹೋಲಿಸಿದರೆ ಅಲ್ಲಿನ ಜೀವನ ಹೆಚ್ಚು ಸಂಕೀರ್ಣವು ಹಾಗೂ ವೈವಿಧ್ಯಮಯ ವಾಗಿತ್ತು ಎಂಬ ಅಂಶವನ್ನು ಮಹಾಪ್ರಬಂಧದಲ್ಲಿ ಎತ್ತಿ ಹಿಡಿಯಲಾಗಿದೆ.

ಪಟ್ಟಣಗಳ ಉದಯಕ್ಕೆ ಕಾರಣವಾಗುವ ಅಂಶಗಳ ಚರ್ಚೆಯೊಂದಿಗೆ ಸಂಶೋಧನೆ, ಪ್ರಾರಂಭಗೊಂಡಿದೆ. ಇದಕ್ಕೆ ಹೊಂದಿಕೊಂಡಂತೆ ನಗರ ಕೇಂದ್ರಗಳ ಬೆಳವಣಿಗೆ ಹಾಗೂ ವಿಸ್ತರಣೆಯು ಕಂಡುಬರುತ್ತದೆ. ಪಟ್ಟಣಗಳ ಬೆಳವಣಿಗೆಯನ್ನು ಚರ್ಚಿಸುವಾಗ ವಿವಿಧ ರೀತಿಯ ಪಟ್ಟಣಗಳನ್ನು ವರ್ಗೀಕರಿಸುವ ಹಾಗೂ ಅವುಗಳ ಸ್ವರೂಪವನ್ನು ನಿರ್ಧರಿಸುವ ಒಂದು ಪ್ರಯತ್ನವನ್ನು ಮಾಡಲಾಗಿದೆ. ಪಟ್ಟಣಗಳ ಉಗಮ ಹಾಗೂ ಬೆಳವಣಿಗೆಯಿಂದಾಗಿ ಪಟ್ಟಣಗಳಲ್ಲಿ ಒಂದು ರೀತಿಯ ವಾತಾವರಣವು ಸೃಷ್ಟಿಯಾಯಿತು. ಪಟ್ಟಣಗಳು ಭೌತಿಕ ಅಂಗಗಳಾಗಿ ಹೊರಹೊಮ್ಮಿದವು. ಇದರ ಜೊತೆಗೆ ಈ ಅಧ್ಯಯನವು ಪಟ್ಟಣಗಳಲ್ಲಿನ ಆಡಳಿತ ಹಾಗೂ ನಗರ ಆರ್ಥಿಕ ಜೀವನದ ಒಂದು ಪರಿಶೀಲನೆಯನ್ನು ಒಳಗೊಂಡಿದೆ.

ಪ್ರಸ್ತುತ ಸಂಶೋಧನೆಯಲ್ಲಿ ಅಳವಡಿಸಿಕೊಂಡಿರುವ ವಿಧಾನ ಹಾಗೂ ಆರಿಸಿಕೊಂಡಿರುವ ಮಾರ್ಗವು ಪರಿಮಾಣಾತ್ಮಕತೆಗಿಂತ ಹೆಚ್ಚು ಗುಣಾತ್ಮಕವಾಗಿದೆ. ಏಕೆಂದರೆ ಪರಿಮಾಣಾತ್ಮಕತೆಯು ವಸ್ತು ವಿಷಯ ಹಾಗೂ ಅಧ್ಯಯನದ ಕಾಲಕ್ಕೆ ಅಷ್ಟಾಗಿ ಸರಿ ಬರುವುದಿಲ್ಲ. ಆದರೆ ಗುಣಾತ್ಮಕ ಅಧ್ಯಯನವು ಹೆಚ್ಚು ಸೂಕ್ತವಾಗಿದೆ. ಪಟ್ಟಣಗಳನ್ನು ವಿಶೇಷವಾಗಿ ಅವುಗಳ ಬೆಳವಣಿಗೆಯನ್ನು ವಿಶ್ಲೇಷಿಸುವಾಗ ಅವುಗಳ ಹಂಚಿಕೆಯ ವಿಧಾನವನ್ನು ವಿವರಿಸುವಾಗ ಪಟ್ಟಣಗಳನ್ನು ವರ್ಗೀಕರಿಸುವಾಗ ಹಾಗೂ ಅವುಗಳ ಸ್ವರೂಪವನ್ನು ನಿರ್ಧರಿಸುವಾಗ ಅವುಗಳು ನಿರ್ವಹಿಸಿದ ಪಾತ್ರ ಹಾಗೂ ಕಾರ್ಯಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಗಿದೆ. ಪರಿಮಾಣಾತ್ಮಕ ಮಾಹಿತಿಯ ಅನುಪಸ್ಥಿತಿ ಯಿಂದಾಗಿ ಗುಣಾತ್ಮಕ ವಿಶ್ಲೇಷಣೆಯನ್ನು ಮಾಡಲಾಗಿದೆ.

ಮೊದಲನೆಯದಾಗಿ ಪಟ್ಟಣಗಳ ಉದಯದ ಕೆಲವು ಅಂಶಗಳನ್ನು ಅಧ್ಯಯನ ಮಾಡಲಾಗಿದೆ. ನಗರ ಕೇಂದ್ರಗಳ ಉದಯಕ್ಕೆ ಕಾರಣವಾದ ವಿವಿಧ ಅಂಶಗಳ ಪರಿಶೀಲನೆಯನ್ನು ಮಾಡಲಾಗಿದೆ. ನಗರೀಕರಣದ ಪ್ರಕ್ರಿಯೆಯು ಹಲವಾರು ಅಂಶಗಳ ಪರಸ್ಪರ ಒಂದನ್ನೊಂದರ ಪರಿಣಾಮ ಎಂದು ತೋರಿಸಲಾಗಿದೆ. ವಿದ್ವಾಂಸರು ನಗರ ಕೇಂದ್ರಗಳ ಉದಯ ಹಾಗೂ ಬೆಳವಣಿಗೆಗೆ ರಾಜಕೀಯ, ಆರ್ಥಿಕ, ಇಲ್ಲವೇ ಸಾಮಾಜಿಕ ಅಂಶಗಳು ಕಾರಣವಾಗಿದ್ದವು ಎಂದು ಹೇಳಿದರೂ ಪ್ರಸ್ತುತ ಅಧ್ಯಯನವು ನಗರೀಕರಣದ ಪ್ರಕ್ರಿಯೆಯ ಹಲವಾರು ಅಂಶಗಳ ಫಲ ಎಂಬುದನ್ನು ಸ್ಪಷ್ಟಪಡಿಸಿದೆ. ಈ ಅಂಶಗಳು ಅವುಗಳ ಕಾರ್ಯ ಹಾಗೂ ಪರಿಣಾಮಗಳಲ್ಲಿ ಭಿನ್ನವಾಗಿದ್ದವು.

ನಗರೀಕರಣದ ಪ್ರಮುಖ ಅಂಶಗಳಲ್ಲಿ (ಮಿಗುತೆ ಮಾರಲು ಅವಕಾಶವಿರುವ ಹೆಚ್ಚುವರಿ ಉತ್ಪಾದನೆ) ಒಂದಾಗಿತ್ತು. ಪಟ್ಟಣಗಳ ಉದಯದಲ್ಲಿ ಇದು ಪ್ರಧಾನ ಕಾರಣವಾಗಿತ್ತು. ಹೊಯ್ಸಳರ ಕಾಲದಲ್ಲಿ ಮಿಗುತೆಯು ಹೆಚ್ಚಿನ ಪ್ರಮಾಣದಲ್ಲಿತ್ತು. ದೊರೆಯುತ್ತಿದ್ದ ಮಿಗುತೆಯನ್ನು ವಿವಿಧ ಮೂಲಗಳಿಂದ ಬಳಕೆ ಮಾಡಲಾಗುತ್ತಿತ್ತು. ಇದು ನಗರೀಕರಣಕ್ಕೆ ದಾರಿಯನ್ನುಂಟು ಮಾಡಿತು. ಕೃಷಿ ಪದಾರ್ಥಗಳಲ್ಲಿ ಮಿಗುತೆಯು ಸಂಭವಿಸಿತು. ಶಾಸನಗಳಲ್ಲಿ ಸಂತೆಗೆ ಆಹಾರ ಧಾನ್ಯಗಳು ಬರುತ್ತಿದ್ದು ದರ ಉಲ್ಲೇಖವು ಇರುವುದರಿಂದ ರೈತನ ಸ್ವಂತ ಅಗತ್ಯವನ್ನು ಪೂರೈಸಿದ ನಂತರ ಉಳಿದ ಹೆಚ್ಚುವರಿ ಆಹಾರಧಾನ್ಯವು ಮಾರುಕಟ್ಟೆಗೆ ಬರುತ್ತಿದ್ದಿತು ಎಂದು ಹೇಳಬಹುದು. ಇದರಿಂದ ಅರಸರ ಭಂಡಾರಕ್ಕೆ ಅಧಿಕ ಆದಾಯ ಬರುತ್ತಿತ್ತು. ಹಾಗಾಗಿ ವಾಣಿಜ್ಯದ ಅಗತ್ಯ ಮತ್ತು ಹೆಚ್ಚುವರಿ ಇದ್ದುದು ಈ ಕಾರಣಗಳಿಂದ ಹೊಯ್ಸಳ ಯುಗದಲ್ಲಿ ಹಲವು ನಗರಕೇಂದ್ರಗಳು ಉದಯಿಸಲು ಅವಕಾಶವಾಯಿತು.

ಮಿಗುತೆಯ ಜೊತೆಗೆ ನಗರೀಕರಣದ ಪ್ರಕ್ರಿಯೆಗೆ ಇತರೆ ಅಂಶಗಳು ಸಹಾಯಕವಾದವು. ಉದಾಹರಣೆಗೆ ಒಂದು ಪ್ರದೇಶದ ಭೌಗೋಳಿಕ ವ್ಯವಸ್ಥೆ ನಗರೀಕರಣಕ್ಕೆ ಅನುಕೂಲಕಾರಿಯಾದ ಅಂಶವಾಗಿ ಪರಿಣಮಿಸಿತು. ದಕ್ಷಿಣ ಭಾರತದ ಪರ್ವತ ಗುಡ್ಡಗಳು ನೈಸರ್ಗಿಕ ಕೋಟೆಯನ್ನು ನಿರ್ಮಿಸಿದ್ದವು ಹಾಗೂ ಕೋಟೆ ಕೊತ್ತಲಗಳನ್ನು ನಿರ್ಮಿಸಲು ಹೆಚ್ಚು ಅವಕಾಶ ಕಲ್ಪಿಸಿಕೊಟ್ಟವು ಮುಂದೆ ಈ ಕೋಟೆಗಳೇ ಪಟ್ಟಣಗಳಾಗಿ ಬೆಳೆದವು. ದಕ್ಷಿಣ ಭಾರತದ ಪೂರ್ವ ಪಶ್ಚಿಮ ತೀರಗಳೆಂದು ಹೆಸರಾಗಿದ್ದ ತೀರ ಪ್ರದೇಶಗಳು ಅವುಗಳ ಹೊರಜಗತ್ತಿನೊಂದಿಗಿನ ಜಲಸಾರಿಗೆ

ಸಂಪರ್ಕದಿಂದಾಗಿ ವ್ಯಾಪಾರ ಮತ್ತು ವಾಣಿಜ್ಯವನ್ನು ಉಂಟು ಮಾಡಿದವು. ಇದರ ಫಲವಾಗಿ ಪಟ್ಟಣಗಳ ಬೆಳವಣಿಗೆಯಾಯಿತು. ಪಟ್ಟಣಗಳನ್ನು ನಿರ್ಮಿಸುವಾಗ ಆ ಸ್ಥಳದ ನಕಾಶೆಯು ಪರಿಗಣ ನಾತ್ಮಕವಾಗಿತ್ತು.

ನಗರೀಕರಣದ ಮತ್ತೊಂದು ಪ್ರಮುಖ ಅಂಶವೆಂದರೆ ಆರ್ಥಿಕ ಅಂಶವಾಗಿದೆ. ಪಟ್ಟಣಗಳ ಬೆಳವಣಿಗೆಯಲ್ಲಿ ವ್ಯಾಪಾರವು ಪ್ರಮುಖವಾದ ಅಂಶವಾಗಿತ್ತು. ವ್ಯಾಪಾರದಿಂದಾಗಿ ಮಾರುಕಟ್ಟೆಯು ಅಸ್ಥಿತ್ವಕ್ಕೆ ಬಂದಿತು ಹಾಗೂ ಮಾರುಕಟ್ಟೆಯು ಹೆಚ್ಚು ಕಡಿಮೆ ಎಲ್ಲಾ ನಗರ ಕೇಂದ್ರಗಳಲ್ಲೂ ಕಂಡು ಬರುತ್ತಿತ್ತು. ಉತ್ತಮ ಸಾರಿಗೆ ಸಂಪರ್ಕದಿಂದಾಗಿ ನಗರೀಕರಣ ತೀವ್ರಗೊಂಡಿತು. ವ್ಯಾಪಾರ ಮಾರ್ಗಗಳಲ್ಲಿ ಹಲವಾರು ನಗರ ಕೇಂದ್ರಗಳು ತಲೆ ಎತ್ತಿದವು. ಉತ್ತಮವಾದ ಸಾರಿಗೆ ವ್ಯವಸ್ಥೆಯು ಪಟ್ಟಣಗಳ ಬೆಳವಣಿಗೆಗೆ ಸಹಕಾರಿಯಾಯಿತು. ಇದರ ಜೊತೆಗೆ ಸಾಮ್ರಾಜ್ಯದಲ್ಲಿ ಹಲವಾರು ವಿಧದ ಕೈಗಾರಿಕೆಗಳು ಅಸ್ಥಿತ್ವಕ್ಕೆ ಬಂದು, ಆರ್ಥಿಕ ಅಂಶವಾಗಿ ನಗರೀಕರಣವನ್ನು ಪ್ರೇರೇಪಿಸಿದವು. ಆ ಕಾಲದ ಪ್ರಮುಖ ಅಂಶಗಳಲ್ಲಿ ಸಂತೆಗಳನ್ನು ಸ್ಥಾಪಿಸಿದ್ದು ಒಂದಾಗಿತ್ತು. ಇದರಿಂದಾಗಿ ಪಟ್ಟಣಗಳು ಬೆಳೆದವು ಸಂತೆಗಳನ್ನು ಪ್ರಾರಂಭಿಸಿದರಿಂದ ಹೊಸ ಪಟ್ಟಣಗಳು ಅಸ್ಥಿತ್ವಕ್ಕೆ ಬಂದವು.

ಎರಡನೆಯದಾಗಿ ಪಟ್ಟಣಗಳ ಬೆಳವಣಿಗೆಗೆ ರಾಜಕೀಯ ಅಂಶಗಳು ಸಹಕಾರಿಯಾಗಿದ್ದವು ಮಿಗುತೆಯ ನಿರ್ವಹಣೆ ಹಾಗೂ ಅದರ ಸಮರ್ಥ ನಿಭಾಯಿಸುವಿಕೆಯು ರಾಜಕೀಯ ಅಂಶವಾಗಿತ್ತು. ಹೊಯ್ಸಳ ಅರಸರು ರಾಜಕೀಯ ಸ್ಥಿರತೆ ಹಾಗೂ ಸುವ್ಯವಸ್ಥೆಯನ್ನು ಸ್ಥಾಪಿಸಿ ಕೃಷಿ ಹಾಗೂ ಕೈಗಾರಿಕೆಯನ್ನು ಪ್ರೋತ್ಸಾಹಿಸುವ ಮೂಲಕ ಹಾಗೂ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಗಮನ ನೀಡುವುದರ ಮೂಲಕ ನಗರ ಬೆಳವಣಿಗೆಗೆ ಅನುಕೂಲಕಾರಿಯಾದ ಸನ್ನಿವೇಶವನ್ನು ಸೃಷ್ಟಿಸಿದರು. ಹೊಯ್ಸಳ ಅರಸರು ಉದಾರ ನೀತಿಯಿಂದ ವ್ಯಾಪಾರ ಮತ್ತು ವಾಣಿಜ್ಯವನ್ನು ಪ್ರೋತ್ಸಾಹಿಸಿದರು ಹಾಗೂ ಅದಕ್ಕೆ ರಕ್ಷಣೆ ಮತ್ತು ಭದ್ರತೆಯನ್ನು ಒದಗಿಸಿದರು. ಪಟ್ಟಣಗಳ ನಿರ್ಮಾಣ ಹಾಗೂ ಬೆಳವಣಿಗೆಯಲ್ಲಿ ಉತ್ತೇಜನ ನೀಡಿದ ರಾಜರು, ಮಂತ್ರಿಗಳು, ದಂಡನಾಯಕರು, ಅಧಿಕಾರಿಗಳು ಇತರೆ ವ್ಯಕ್ತಿಗಳ ನಿದರ್ಶನಗಳಿದ್ದವು. ಇವೆಲ್ಲರೂ ಹಲವು ವಿಧದಲ್ಲಿ ನಗರ ಚಟುವಟಿಕೆಯನ್ನು ಪ್ರೋತ್ಸಾಹಿಸಿದರು. ರಾಜಕೀಯ ಅಂಶಕ್ಕೆ ಅಧೀನವಾಗಿ ಯುದ್ಧವು ಸಹ ನಗರೀಕರಣದ ಅಂಶವಾಗಿ ಪರಿಗಣಿಸಲ್ಪಟ್ಟಿದೆ. ಆದರೆ ಅದು ಸಕಾರಾತ್ಮಕವಾಗಿರುವುದಕ್ಕಿಂತ ಹೆಚ್ಚಾಗಿ ನಕಾರಾತ್ಮಕವಾಗಿ ಕಂಡು ಬಂದಿತು.

ಪಟ್ಟಣಗಳ ಬೆಳವಣಿಗೆಗೆ ಧಾರ್ಮಿಕ ಅಂಶಗಳುಕೂಡ ಸಹಕಾರಿಯಾಗಿದ್ದವು. ಧಾರ್ಮಿಕ ಸಂಸ್ಥೆಗಳಾದ ದೇವಾಲಯಗಳು ಮಠಗಳು ಹಾಗೂ ಆಶ್ರಮಗಳು ಪಟ್ಟಣಗಳ ಬೆಳವಣಿಗೆಗೆ ಸಹಕಾರಿಯಾಗಿದ್ದವು. ಈ ಧಾರ್ಮಿಕ ಸಂಸ್ಥೆಗಳು ಜನರನ್ನು ತಮ್ಮ ಕಡೆಗೆ ಆಕರ್ಷಿಸಿದವು. ಆರ್ಥಿಕ ಚಟುವಟಿಕೆಗಳು ದೇವಾಲಯಗಳ ಸುತ್ತಮುತ್ತ ಬೆಳೆದವು. ಇದರ ಜೊತೆಗೆ ಧಾರ್ಮಿಕ ಕೇಂದ್ರಗಳಾಗಿ ಜನರನ್ನು ತಮ್ಮ ಕಡೆಗೆ ಸೆಳೆದವು. ಇದರಿಂದಾಗಿ ಪಟ್ಟಣಗಳು ದೇವಾಲಯಗಳ ಸುತ್ತಮುತ್ತ ಬೆಳೆದವು.

ಹೊಯ್ಸಳರ ಸಾಮ್ರಾಜ್ಯದಲ್ಲಿ ಹಳ್ಳಿಗಳನ್ನು ಪುರಗಳು ಅಥವಾ ಪಟ್ಟಣಗಳಾಗಿ ಪರಿವರ್ತಿಸಿದ ಹಲವಾರು ನಿದರ್ಶನಗಳಿದ್ದವು. ಇದು ಅನೇಕ ಪಟ್ಟಣಗಳು ಬೆಳೆಯಲು ಕಾರಣವಾಯಿತು. ಅವುಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರು. ಇದರಿಂದ ಇವುಗಳು ಪಟ್ಟಣಗಳಾಗಿ ಪರಿವರ್ತನೆಯಾದವು. ಹೊಯ್ಸಳ ಅರಸರು ಹೊಸ ಪಟ್ಟಣಗಳ ರಚನೆಯ ಜೊತೆಗೆ ಅನೇಕ ಉಪಪಟ್ಟಣಗಳನ್ನು ನಿರ್ಮಿಸಿದರು. ಹೊಸದಾಗಿ ನಿರ್ಮಿಸಿದ ಪಟ್ಟಣಗಳ ಹೊರತಾಗಿ ಬೆಳವಣಿಗೆಯ ಹಂತದಲ್ಲಿದ್ದ ಹಲವಾರು ಪಟ್ಟಣಗಳಿದ್ದವು. ಈ ಪಟ್ಟಣಗಳು ನಿರ್ವಹಿಸಿದ ಪಾತ್ರ ಪ್ರಮುಖವಾಗಿತ್ತು. ಇವುಗಳು ಬೇರೆ ಪಟ್ಟಣಗಳಿಗಿಂತ ಭಿನ್ನವಾಗಿದ್ದವು ಹಾಗೂ ಅವುಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸಬಹುದಾಗಿತ್ತು. ಅವುಗಳನ್ನು ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಸ್ವರೂಪದ ಪಟ್ಟಣಗಳು ಎಂದು ಗುರುತಿಸಬಹುದು.

ಆರ್ಥಿಕ ಸ್ವರೂಪದ ಪಟ್ಟಣಗಳು ವ್ಯಾಪಾರ ಹಾಗೂ ವಾಣಿಜ್ಯವನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದವು. ಕ್ರಮೇಣವಾಗಿ ಮಧ್ಯಕಾಲೀನ ಪಟ್ಟಣಗಳ ಅನೇಕ ಆಸ್ತಿಗಳಾದ ಮಾರುಕಟ್ಟೆಗಳು, ದೇವಾಲಯಗಳು ಮುಂತಾದವುಗಳನ್ನು ಅವುಗಳು ಬೆಳೆಸಿದವು. ಈ ಪಟ್ಟಣ ಗಳಲ್ಲಿ ವರ್ತಕರು ಕುಶಲಕರ್ಮಿಗಳು ಹಾಗೂ ವೈವಿಧ್ಯಮಯ ಗುಂಪುಗಳಿದ್ದವು. ಸಾಮಾನ್ಯವಾಗಿ ಈ ರೀತಿಯಾದ ಪಟ್ಟಣಗಳು ಸಮುದ್ರ ತೀರಗಳ ಬಳಿ ಕಂಡುಬರುತ್ತಿದ್ದವು. ಈ ಅಂಶವನ್ನು ಸ್ಪಷ್ಟಪಡಿಸಲು ಕೆಲವು ಉದಾಹರಣೆಗಳನ್ನು ಕೊಡಬಹುದು. ವಾಣಿಜ್ಯ ಪಟ್ಟಣಗಳ ಬೆಳವಣಿಗೆಗೆ ಒಂದು ಫಲವತ್ತಾದ ಪ್ರದೇಶವೆಂದರೆ ಅದು ಪಶ್ಚಿಮ ತೀರವಾಗಿದ್ದಿತು. ಹೆಚ್ಚು ಸಂಖ್ಯೆಯ ಪಟ್ಟಣಗಳನ್ನು ದಕ್ಷಿಣ ಹಾಗೂ ಉತ್ತರ ಕನ್ನಡ ತೀರಗಳ ಮೇಲೆ ನೋಡಬಹುದು. ಶಾಸನಗಳು ಈ ಪಟ್ಟಣಗಳಲ್ಲಿನ ಆರ್ಥಿಕ ಹಾಗೂ ವಾಣಿಜ್ಯ ಚಟುವಟಿಕೆಗಳ ಬಗ್ಗೆ ತಿಳಿಯಲು ಸಹಕಾರಿಯಾಗಿವೆ.

ರಾಜಕೀಯ ಸ್ವರೂಪದ ನಗರಕೇಂದ್ರಗಳು ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಅವುಗಳು ಸಾಮ್ರಾಜ್ಯದ ರಾಜಧಾನಿಗಳು, ಪ್ರಮುಖ ಕೇಂದ್ರಗಳು ಹಾಗೂ ಕೋಟೆಗಳು ಆಡಳಿತ ಕೇಂದ್ರಗಳು ಮತ್ತು ಸೇನಾ ಮುಖ್ಯ ನೆಲೆಗಳಾಗಿದ್ದವು.

ಮಧ್ಯಕಾಲೀನ ಯುಗದಲ್ಲಿ ಕೋಟೆಗಳು ಪ್ರಮುಖವಾಗಿದ್ದವು ಹಾಗೂ ಅವುಗಳು ಕೋಟೆಯ ಪಟ್ಟಣಗಳಾಗಿ ಉದಯಿಸಿದವು. ಅವುಗಳ ಆಯಕಟ್ಟಿನ ನೆಲೆ ಹಾಗೂ ಶಕ್ತಿಯಿಂದಾಗಿ ಸಮಕಾಲೀನ ಯುಗದಲ್ಲಿ ಒಂದು ಪ್ರಮುಖವಾದ ಪಾತ್ರವನ್ನು ವಹಿಸುವಂತೆ ಮಾಡಿದವು.

ಧಾರ್ಮಿಕ ಸ್ವರೂಪದ ನಗರಕೇಂದ್ರಗಳು ದೇವಾಲಯಗಳಾಗಿದ್ದು ದೊಡ್ಡ ಮೂರ್ತಿಗಳು (ದೇವತೆಗಳು) ಮಠಗಳು ಹಾಗೂ ಆಶ್ರಮಗಳ ಆಶ್ರಯ ಸ್ಥಾನಗಳಾಗಿದ್ದವು. ಇವುಗಳು ಯಾತ್ರಾ ಸ್ಥಳಗಳು ಆಗಿದ್ದವು. ನಗರ ಚಟುವಟಿಕೆಗಳಲ್ಲಿ ಧರ್ಮದ ಪಾತ್ರವೂ ಪ್ರಮುಖವಾಗಿತ್ತು ಹಾಗೂ ನಗರ ಬೆಳವಣಿಗೆಯಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಮಹತ್ವವಾದ ಪಾತ್ರವನ್ನು ವಹಿಸಿದವು.

ಮೂರನೆಯದಾಗಿ ನಗರ ಬೆಳವಣಿಗೆಯಿಂದಾಗಿ ವಿವಿಧ ರೀತಿಯ ಹಾಗೂ ವೈವಿಧ್ಯಮಯ ವಾದ ನಗರಕೇಂದ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡವು. ಆದರೆ ಆ ಬೆಳವಣಿಗೆಯು ಸಮಾನವಾಗಿರಲಿಲ್ಲ. ಅದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿತ್ತು. ಈ ಭಿನ್ನತೆಯು ಪ್ರಮಾಣ ಹಾಗೂ ಗಾತ್ರಗಳೆರಡರಲ್ಲೂ ಕಂಡುಬರುತ್ತಿತ್ತು. ಗಾತ್ರದಲ್ಲಿನ ಭಿನ್ನತೆಯು ಸಾಮ್ರಾಜ್ಯದುದ್ದಕ್ಕೂ ಹರಡಿದ್ದ ಪಟ್ಟಣಗಳಲ್ಲಿನ ಒಂದು ಜೋಡಣೆ ಅಥವಾ ಹಂಚಿಕೆಯ ವಿಧಾನವನ್ನು ತೋರಿಸುತ್ತಿತ್ತು. ಇದನ್ನು ನಗರ ರಚನೆಯೊಂದು ಹೇಳಬಹುದು. ಈ ನಗರ ರಚನೆಯು ಎರಡು ಹಂತಗಳಲ್ಲಿತ್ತು ಇದರ ಅಧ್ಯಯನವು ಎರಡು ದೃಷ್ಟಿಕೋನಗಳನ್ನು ಹೊಂದಿದೆ. ಒಂದು ಸಾಮ್ರಾಜ್ಯದ ವಿವಿಧ ಪ್ರದೇಶಗಳಲ್ಲಿದ್ದ ವಿವಿಧ ಗಾತ್ರಗಳ ಪಟ್ಟಣಗಳ ಹಂಚಿಕೆ ಎರಡನೆಯದೆಂದರೆ ಪಟ್ಟಣವೊಂದರ ಒಳರಚನೆ, ಅಂದರೆ ಒಂದು ಪಟ್ಟಣವು ದೇವಾಲಯಗಳು, ಅರಮನೆಗಳು, ಮಾರುಕಟ್ಟೆ, ರಸ್ತೆಗಳು, ಮನೆಗಳ ಸಾಲುಗಳು ಹಾಗೂ ಅದರೊಳಗಿನ ಕಟ್ಟಡಗಳು ಪಟ್ಟಣದ ಒಳಭಾಗದಲ್ಲಿ ಅದೊಂದು ರೀತಿಯ ಜೋಡಣೆ ಅಥವಾ ರಚನಾ ವಿಧಾನವಾಗಿತ್ತು.

ಒಂದು ಪಟ್ಟಣದ ಗಾತ್ರವನ್ನು ನಿರ್ಧರಿಸುವಲ್ಲಿ ಒಂದು ನಿರ್ದಿಷ್ಟ ಪಟ್ಟಣವನ್ನು ಅಭ್ಯಸಿಸಿ ಅದರ ಆಧಾರದ ಮೇಲೆ ಮಾಡಿದ ಅಭಿಪ್ರಾಯಗಳ ಮಾದರಿಯ ಅಧ್ಯಯನವು ಗುಣಾತ್ಮಕವಾಗಿದೆ. ಈ ಅಭಿಪ್ರಾಯವು ಸ್ವಲ್ಪಮಟ್ಟಿಗೆ ಅಮೂರ್ತವಾಗಿ ತೋರುತ್ತದೆ. ಇದರ ಜೊತೆಗೆ ಈ ಒಂದು ಅಧ್ಯಯನದಲ್ಲಿ ಪಟ್ಟಣಗಳು ನಿರ್ವಹಿಸಿದ ಪಾತ್ರ ಹಾಗೂ ಅವುಗಳು ಮಾಡಿದ ಕಾರ್ಯಗಳು ಹಾಗೂ ಕಾರ್ಯಾಚರಣೆಯ ಸಾಂಧ್ರತೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಹೊಯ್ಸಳರ ಸಾಮ್ರಾಜ್ಯದಲ್ಲಿ ನಗರ ರಚನೆಯು ವಿವಿಧ ಸ್ಥರಗಳಲ್ಲಿ ವಿವಿಧ ಗಾತ್ರದ ಮನೆಗಳನ್ನು ಹೊಂದಿತು. ಕೆಳವಲಯದಲ್ಲಿ ಸಣ್ಣಗಾತ್ರದ ನಗರ ಕೇಂದ್ರಗಳಿದ್ದವು. ಈ ವಸಾಹತುಗಳು ದೊಡ್ಡ ಹಳ್ಳಿಗಳಿಗಿಂತ ದೊಡ್ಡದಾಗಿರದಿದ್ದರು ಅವು ನಗರ ಲಕ್ಷಣಗಳನ್ನು ಹೊಂದಿದ್ದವು. ಈ ಪಟ್ಟಣಗಳು ಗ್ರಾಮೀಣ ಪರಿಸರದ ಮಧ್ಯೆ ಇದ್ದರು ಬಹಳ ವಿಶಿಷ್ಟವಾಗಿದ್ದವು. ಈ ರೀತಿಯ ವಸಾಹತುಗಳು ನಗರ ಕೇಂದ್ರಗಳಾಗಿ ಬೆಳೆದ ಮೇಲೆ ವಿಸ್ತರಣೆಯ ಲಕ್ಷಣಗಳನ್ನು ತೋರಿಸಲಿಲ್ಲ. ಈ ರೀತಿಯ ನಗರ ಕೇಂದ್ರಗಳು ಹೆಚ್ಚಿನ ಪಾತ್ರಗಳನ್ನು ಹೊಂದಿದ್ದವು. ಅವುಗಳು ಹೆಚ್ಚಿನ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಮಧ್ಯಕಾಲೀನ ಪಟ್ಟಣಗಳು ವೈಶಿಷ್ಟತೆಗಳನ್ನು ಹೊಂದಿದ್ದವು. ಪಟ್ಟಣಗಳ ಕಾರ್ಯಕ್ಷೇತ್ರವು ಕೇವಲ ಸುತ್ತಮುತ್ತಲಿನ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವುಗಳು ನಿರ್ವಹಿಸುತ್ತಿದ್ದ ವಿವಿಧ ಕಾರ್ಯಗಳ ಜೊತೆಗೆ ಕೆಲವು ಪಟ್ಟಣಗಳು ರಾಜಕೀಯ, ಆರ್ಥಿಕ, ಧಾರ್ಮಿಕ ಪಾತ್ರಗಳನ್ನು ನಿರ್ವಹಿಸುತ್ತಿದ್ದವು. ಇವುಗಳ ಸಂಖ್ಯೆ ಕಡಿಮೆ ಇದ್ದರೂ ಇವುಗಳ ಕಾರ್ಯ ಬಹಳ ಪ್ರಮುಖವಾಗಿತ್ತು. ಈ ರೀತಿಯ ಪಟ್ಟಣಗಳನ್ನು ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಕಾಣಬಹುದಾಗಿತ್ತು.

ಮಧ್ಯಕಾಲೀನ ಪಟ್ಟಣದ ಪ್ರಮುಖ ವೈಶಿಷ್ಟತೆಯೇನೆಂದರೆ ಕೋಟೆಯಾಗಿದೆ ಆಗ ಪಟ್ಟಣಗಳ ಸುತ್ತ ಕೋಟೆಯನ್ನು ನಿರ್ಮಿಸಲಾಗುತ್ತಿತ್ತು ಅಥವಾ ನೈಸರ್ಗಿಕ ರಕ್ಷಣೆ ದೊರೆಯುವಂತಹ ಸ್ಥಳಗಳಲ್ಲಿ ಪಟ್ಟಣಗಳನ್ನು ನಿರ್ಮಿಸಲಾಗುತ್ತಿತ್ತು. ಕೃತಕ ಹಾಗೂ ನೈಸರ್ಗಿಕ ಕೋಟೆಗಳೆರಡನ್ನು ರಕ್ಷಣೆಯ ದೃಷ್ಟಿಯಿಂದ ನಿರ್ಮಿಸಲಾಗಿತ್ತು. ಸಾಮ್ರಾಜ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಕೋಟೆಗಳೇ ಇದಕ್ಕೆ ಸಾಕ್ಷಿಯಾಗಿವೆ. ಹಳೇಬೀಡು ಕೋಟೆಯ ಸುತ್ತ ಬೆಳೆದಿತು. ಹಳೇಬೀಡಿನ ಒಳರಚನೆಗೆ ಸಂಬಂಧಿಸಿದಂತೆ ಕೋಟೆಯ ಹೊರಪದರದಿಂದ ಹಿಡಿದು ಅದರ ಕೇಂದ್ರ ಸ್ಥಾನದವರೆಗೂ ಹಲವಾರು ರೀತಿಯ ಕಟ್ಟಡಗಳನ್ನು ಹೊಂದಿತ್ತು. ಅವುಗಳೆಂದರೆ ರಾಜರ ಅರಮನೆ,

ಮಾರುಕಟ್ಟೆಯ ಸ್ಥಳ, ರಸ್ತೆಗಳು, ಮನೆಗಳ ಸಾಲುಗಳು, ದೇವಾಲಯ ಹಾಗೂ ಅನೇಕ ಭವ್ಯವಾದ ಕಟ್ಟಡಗಳಿದ್ದವು.

ನಾಲ್ಕನೆಯದಾಗಿ ವಿವಿಧ ರೀತಿಯ ಹಾಗೂ ವಿವಿಧ ಗಾತ್ರಗಳ ಪಟ್ಟಣಗಳು ಉತ್ತಮವಾದ ಆಡಳಿತವನ್ನು ಹೊಂದಿದ್ದವು ಹಾಗೂ ನಿರ್ವಹಣೆಯನ್ನು ಹೊಂದಿದ್ದವು. ಅಧ್ಯಯನದ ಈ ಅಂಶವು ಪಟ್ಟಣ ಸಭೆಯ ಅಧಿಕಾರ ಹಾಗೂ ಕರ್ತವ್ಯಗಳು ಮತ್ತು ಅದರ ಅಧಿಕಾರಗಳನ್ನೊಳಗೊಂಡಿದೆ. ಪಟ್ಟಣಗಳು ತಮ್ಮದೇ ಆದ ಸಭೆಗಳನ್ನು ಹೊಂದಿದ್ದವು. ಈ ಸಭೆಗಳು ಅವುಗಳ ಪ್ರತಿನಿಧಿಗಳು ಹಾಗೂ ಸದಸ್ಯರ ಮುಖಾಂತರ ಕಾರ್ಯ ನಿರ್ವಹಿಸುತ್ತಿದ್ದವು.

ಪುರಸಭೆಗಳು ನಗರ ಸಭಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಅವುಗಳಿಗೆ ವಿಶೇಷ ಹಕ್ಕು ಬಾಧ್ಯತೆಗಳಿದ್ದವು. ಈ ಸಭೆಗಳೊಂದಿಗೆ ಪಟ್ಟಣಗಳ ಆಡಳಿತವನ್ನು ನಿರ್ವಹಿಸಲು ಹಲವಾರು ಅಧಿಕಾರಿಗಳಿದ್ದರು. ದಕ್ಷಿಣ ಕನ್ನಡದ ಕೆಲವು ಪಟ್ಟಣಗಳ ಅಧ್ಯಯನದಿಂದ ಅವುಗಳನ್ನು ಹಲವು ಕೇರಿಗಳಾಗಿ ವಿಂಗಡಿಸಲಾಗಿತ್ತು ಎಂಬ ಅಂಶ ತಿಳಿದು ಬರುತ್ತದೆ.

ಪಟ್ಟಣಗಳ ಆಡಳಿತಕ್ಕೆ ಸಂಬಂಧಿಸಿದಂತೆ ಪಟ್ಟಣಸ್ವಾಮಿಯೆಂಬ ಪ್ರಮುಖ ಅಧಿಕಾರಿ ಯಿದ್ದನು. ಅವನು ಪಟ್ಟಣದ ಪಾಲಕನಾಗಿದ್ದನು. ಸಾಮಾನ್ಯವಾಗಿ ವೃತ್ತಿದ ಸಂಘದ ಪ್ರಮುಖ ಸದಸ್ಯನನ್ನು ಪಟ್ಟಣಸ್ವಾಮಿಯಾಗಿ ಆಯ್ಕೆ ಮಾಡಲಾಗುತ್ತಿತ್ತು. ಪಟ್ಟಣಸ್ವಾಮಿಯ ಹುದ್ದೆಯ ವಂಶಪಾರಂಪರ್ಯವಾಗಿದ್ದರು. ಕೆಲವು ವೇಳೆ ಆಯ್ಕೆಯ ಮುಖಾಂತರ ನಡೆಯುತ್ತಿತ್ತು. ಹೊಯ್ಸಳ ಶಾಸನಗಳು ಪಟ್ಟಣಸ್ವಾಮಿಗಳನ್ನು ಮೂಲಸ್ಥಂಭ ಅಥವಾ ರಾಜ್ಯದ ಅಭ್ಯುದಯಕ್ಕೆ ಕಂಬದಂತೆ ಆಧಾರವಾಗಿರುವವರು ಎಂದು ವರ್ಣಿಸುತ್ತವೆ. ಪಟ್ಟಣಸ್ವಾಮಿಯು ಕಾರ್ಯಾಂಗ ಹಾಗೂ ನ್ಯಾಯಾಂಗದ ಎರಡು ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಅವನು ನಿರ್ವಹಿಸುತ್ತಿದ್ದ ಕರ್ತವ್ಯಗಳಿಗೆ ಸಂಭಾವನೆಯನ್ನು ಪಡೆಯುತ್ತಿದ್ದನು.

ಐದನೆಯದಾಗಿ ಪಟ್ಟಣಸ್ವಾಮಿಯ ಅಧಿಕಾರ ಮತ್ತು ಸ್ಥಾನಮಾನಗಳು ಹಾಗೂ ಪಟ್ಟಣ ಆಡಳಿತದಲ್ಲಿ ಅವನ ಪಾತ್ರವು ಪಟ್ಟಣಗಳ ಆರ್ಥಿಕ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ನಗರಳು ಉತ್ಪಾದನೆ ಹಾಗೂ ಹಂಚಿಕೆಯ ಕೇಂದ್ರಗಳಾಗಿದ್ದವು. ವ್ಯಾಪಾರ ಮತ್ತು ವಾಣಿಜ್ಯ ಕೈಗಾರಿಕೆ ಪಟ್ಟಣ

ವಾಸಿಗಳ ಪ್ರಮುಖ ಕಸುಬುಗಳಾಗಿದ್ದವು. ಕೈಗಾರಿಕೆಗಳ ಬೆಳವಣಿಗೆ ವ್ಯಾಪಾರದ ವಿಸ್ತರಣೆ ಹಾಗೂ ವಾಣಿಜ್ಯದ ವಿಸ್ತರಣೆಯು ನಗರಗಳ ಬೆಳವಣಿಗೆಗೆ ದಾರಿಯಾಯಿತು.

ಕೃಷಿಕೈಗಾರಿಕೆಗಳು, ಗಣಿಗಾರಿಕೆ ಹಾಗೂ ಕಲ್ಲಿದ್ದಲು, ಕರಕುಶಲ ಕೈಗಾರಿಕೆ, ಜವಳಿ ಉದ್ಯಮ ಹಾಗೂ ಮೀನುಗಾರಿಕೆಯಂತಹ ಹಲವು ಕೈಗಾರಿಕೆಗಳು ಈ ಕಾಲದಲ್ಲಿ ಅಭಿವೃದ್ಧಿ ಹೊಂದಿದವು. ಇದರ ಜೊತೆಗೆ ಹಲವಾರು ಅಂಶಗಳಿಂದಾಗಿ ಆಂತರಿಕ ಹಾಗೂ ಬಾಹ್ಯ ವ್ಯಾಪಾರ ಗಳೆರಡು ವಿಸ್ತಾರವಾದವು.

ಪಟ್ಟಣಗಳಲ್ಲಿನ ಆರ್ಥಿಕ ಜೀವನಕ್ಕೆ ಸಂಬಂಧಿಸಿದಂತೆ ಮತ್ತೊಂದು ಪ್ರಮುಖ ಅಂಶವೆಂದರೆ ವೃತ್ತಿ ಸಂಘದ ಅಸ್ಥಿತ್ವವಾಗಿತ್ತು. ಪಟ್ಟಣಗಳಲ್ಲಿನ ಆರ್ಥಿಕ ಚಟುವಟಿಕೆಗಳು ಈ ವೃತ್ತಿ ಸಂಘಗಳನ್ನು ಅವಲಂಬಿಸಿದವು. ಆಗ ಎರಡು ರೀತಿಯ ವೃತ್ತಿ ಸಂಘಗಳಿದ್ದವು. ಅವುಗಳೆಂದರೆ ವೃತ್ತಿ ಸಂಘ ಹಾಗೂ ವರ್ತಕ ಸಂಘ.

ಮಧ್ಯಕಾಲೀನ ಯುಗದಲ್ಲಿ ಪಾಂಚಾಲರು ಅಥವಾ ವೀರ ಪಾಂಚಾಲರು ಕೈಕೊಳರು ಗಾಣಿಗರು, ಕುಂಬಾರರು ಮುಂತಾದ ಅನೇಕ ವೃತ್ತಿ ಸಂಘಗಳಿದ್ದವು. ನಗರೀಕರಣದ ಪರಿಣಾಮವಾಗಿ ವೃತ್ತಿಸಂಘಗಳು ಪ್ರಾಮುಖ್ಯತೆಯನ್ನು ಗಳಿಸಿದವು. ಹಾಗೂ ಕುಶಲಕರ್ಮಿಗಳು ತಮ್ಮ ಸ್ಥಾನಮಾನ ಗಳನ್ನು ಉತ್ತಮ ಪಡಿಸಿಕೊಂಡರು. ಅವರು ಆಡಳಿತ ವರ್ಗದವರಿಂದ ಬಿರುದು ಬಾವಲಿಗಳು ಮತ್ತು ಹಕ್ಕುಬಾಧ್ಯತೆಗಳನ್ನು ಪಡೆದರು. ಕೆಲವು ಬಾರಿ ಧಾರ್ಮಿಕ ಪಂಥಗಳ ಮುಖ್ಯಸ್ಥರು ಅವರಿಗೆ ಕೆಲವು ವಿಶೇಷ ಸವಲತ್ತುಗಳನ್ನು ಹಾಗೂ ಹಕ್ಕುಗಳನ್ನು ನೀಡುತ್ತಿದ್ದರು.

ಆ ಕಾಲದಲ್ಲಿ ಆರ್ಥಿಕ ಜೀವನದಲ್ಲಿ ವೃತ್ತಿ ಸಂಘಗಳ ಪಾತ್ರಕ್ಕಿಂತ ವ್ಯಾಪಾರಿಗಳ ಪಾತ್ರ ಪ್ರಮುಖವಾಗಿತ್ತು. ಆಗ ಹಲವಾರು ಅಂಶಗಳು ವರ್ತಕ ಸಂಘಗಳ ರಚನೆಗೆ ಕಾರಣವಾಗಿತ್ತು.

ದಕ್ಷಿಣ ಕನ್ನಡವು ಸಾಮ್ರಾಜ್ಯದ ಅತ್ಯಂತ ಹೆಚ್ಚು ನಗರೀಕರಣ ಪ್ರದೇಶಗಳಲ್ಲಿ ಒಂದಾಗಿತ್ತು. ಇದು ಹಲವು ವರ್ತಕ ಸಂಘಗಳ ಚಟುವಟಿಕೆಯ ಕೇಂದ್ರವಾಗಿತ್ತು. ಅಲ್ಲಿದ್ದ ವರ್ತಕ ಸಂಘಗಳು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದವು.

ಈ ರೀತಿಯಾಗಿ ವೃತ್ತಿ ಹಾಗೂ ವರ್ತಕ ಸಂಘಗಳೆರಡು ಆ ಕಾಲದ ಪಟ್ಟಣಗಳ ಆರ್ಥಿಕ, ಸಾಮಾಜಿಕ ಜೀವನದಲ್ಲಿ ಪ್ರಬಲ ಶಕ್ತಿಗಳಾಗಿದ್ದವು. ಅವುಗಳು ಪೌರ ವಿಷಯಗಳಲ್ಲಿ ಅಂದರೆ ಆಡಳಿತ ಹಾಗೂ ಆರ್ಥಿಕ ಚಟುವಟಿಕೆಗಳಲ್ಲಿ ಬಹಳ ಪ್ರಬಲವಾಗಿದ್ದವು. ಆ ಕಾಲದ ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಇವುಗಳು ಹಲವಾರು ಕಾರ್ಯಗಳನ್ನು ನಿರ್ವಹಿಸುತ್ತಿದ್ದವು.

ಆರನೆಯದಾಗಿ ನಗರ ಅಧ್ಯಯನಕ್ಕೆ ಸಂಬಂಧಿಸಿದ ಮತ್ತೊಂದು ಪ್ರಮುಖ ಅಂಶವೆಂದರೆ ನಗರ ಸಾಮಾಜಿಕ ರಚನೆಯು ವಿಶ್ಲೇಷಣೆಯಾಗಿದೆ. ನಗರವು ವೈವಿಧ್ಯಮಯ ಸಾಮಾಜಿಕ ಲಕ್ಷಣಗಳನ್ನು ಹೊಂದಿದ್ದರಿಂದ ಅದರ ಸ್ವರೂಪವು ಸಂಕೀರ್ಣವಾಗಿತ್ತು. ನಗರ ಸಂಯೋಜನೆಯು ವಿವಿಧ ಗುಂಪುಗಳು ಜಾತಿಗಳು ಹಾಗೂ ವರ್ಗಗಳನ್ನು ಹೊಂದಿತ್ತು. ಇದರ ಜೊತೆಗೆ ನಗರ ಸಮಾಜವು ಮುಕ್ತವು ಹಾಗೂ ಸಡಿಲವು ಆಗಿದ್ದರಿಂದ ನಗರಗಳಲ್ಲಿ ಒಂದು ರೀತಿಯ ಸ್ಥಿತಿಸ್ಥಾಪಕತೆ ಸಾಧ್ಯವಿತ್ತು.

ಪಟ್ಟಣದ ಜನ ಸಂಯೋಜನೆಯು ಉನ್ನತ ಶ್ರೇಣಿ ಹಾಗೂ ಇನ್ನಿತರ ಸಾಮಾಜಿಕ ನಿರ್ಬಂಧಗಳು ಸಡಿಲಗೊಳ್ಳತೊಡಗಿದವು. ಇದಕ್ಕೆ ಕಾರಣವೇನೆಂದರೆ ವಸತಿಯಾಗಿತ್ತು. ಆ ಕಾಲದಲ್ಲಿ ಬಹಳಷ್ಟು ಗುಂಪುಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳಿಂದ ವಲಸೆ ಹೋಗುತ್ತಿದ್ದವು. ಇದರಿಂದಾಗಿ ನಗರದ ಜನಸಂಖ್ಯೆಯು ತ್ವರಿತವಾಗಿ ಬೆಳೆಯುತ್ತ ಹೋಯಿತು.

ನಗರ ಸಮಾಜದ ಸಡಿಲ ಸ್ವರೂಪವು ಒಂದು ನಿರ್ದಿಷ್ಟ ಜಾತಿ ವರ್ಗ ಅಥವಾ ಗುಂಪಿನ ಜನರ ಸಾಮಾಜಿಕ ಸ್ಥಾನಮಾನಗಳು ಸುಧಾರಿಸಿದುದರ ಮೂಲಕವಾಗಿ ಕಂಡುಬಂದಿತು. ಆ ಕಾಲದಲ್ಲಿ ಅನೇಕ ಕೆಳಜಾತಿಗಳು ಸಾಮಾಜಿಕ ಶ್ರೇಣಿಯ ಹಲವಾರು ಸ್ಥರಗಳನ್ನು ಹತ್ತುವ ಪ್ರಯತ್ನ ಮಾಡಿದರು. ಇದು ಸಂಘರ್ಷ ಹಾಗೂ ಗಲಭೆಗೆ ಅವಕಾಶವನ್ನುಂಟು ಮಾಡಿತು. ಏಕೆಂದರೆ ನಗರೀಕರಣ ಪ್ರವೃತ್ತಿಯು ಅವ್ಯಾಹತವಾಗಿ ಸಾಗಿತ್ತು. ಆಗ ಅರಸರು ಸಮಾಜದಲ್ಲಾಗುತ್ತಿದ್ದ ಮಾರ್ಪಾಡುಗಳಿಗೆ ಸ್ಪಂದಿಸಬೇಕಾಯಿತು. ಹಾಗೂ ವಿಶೇಷ ಹಕ್ಕುಬಾಧ್ಯತೆಗಳು ರಿಯಾಯಿತಿಗಳು, ಸವಲತ್ತುಗಳು ಮತ್ತು ಗೌರವಾಧಾರಗಳನ್ನು ನೀಡಬೇಕಾಗಿ ಬರುತ್ತಿತ್ತು. ಆ ಕಾಲದಲ್ಲಿ ಕೆಲವು ಕೆಳಜಾತಿಗಳು ಸಮನಾದ ಸವಲತ್ತುಗಳನ್ನು ಪಡೆದಿದ್ದವು.

# ಗ್ರಂಥಸೂಚಿ
## ಮೂಲ ಆಧಾರಗಳು

**Epigraphy**


- Annual Reports of the Archaeological Survey of India 1887 onwards
- Annual Reports of the Archaeological Department 1906 onwards
- Annual Reports of Indian Epigraphy 1964 onwards
- Annual Reports of South Indian Epigraphy 1887 onwards
- Annual Reports of Epigraphy Madras
- Andhra Pradesh Government Archaeological Series Hyderabad Select Stone Inscriptions
- Corpus Inscriptions Indiacarum Vol. IV (Ed) by Mirashi V.V.Ootacamund 1955
- Desai P.B. (Ed) A Corpus of Inscriptions in the Kannada Districts of Hyderabad State, Hyderabad 1958. Desai P.B. (Ed) Sasana Parichaya.
- Descriptive list of Kannada Stone Inscriptions Examined by Research Institute (Ed) by Annigeri A.M. and Joshi B.R. Dharwar 1961.
- Desai P.B. Jainism in South India and some Jaina Epigraphy – Sholapur, 1957.
- Epigraphia Carnatica Vols 1 to 16 Bangalore 1980 onwards.
- Epigraphica Carnatica (Revised Edition) volumes 1 to 9 Kannada Adhyana University of Mysore 1892 onwards.

**Epigraphia India**

- Elliot Sir. Walter Collection of South Indian Inscriptions Vol. 11 Kannada and Other Dynastics.
- Fleet John Faithfull. Pali Sanskrit and Old Canarese Inscriptions from the Bombay Presidency, etc. London 1878.
- Hyderabad Archaeologial Reports Indian Antiquary Bombay 1872-1923.
- Karnataka Inscriptions Vol. 1 to 3 (Ed) R.S. Panchamukhi Vol. 4, (Ed) A.M. Annigeri Vol.5, (Ed) P.B. Desai Vol.6 (Ed) Gopal, Dharwar, 1941, 1961.
- Kundangar K.G. (Ed) Inscriptions in Northern Karnataka and Kolhapur State, Kolhapur 1939.
- Rangacharya V.A. Topographical List of the Inscription of Southern India Vols. 1 to 3. Madras, 1919.
- South Indian Inscriptions Archaeological Survey of India Vols. III, VII, VIII, IX, XV, XX, 1890 onwards.
- Srikanta Sastry S. Sources of Karnataka History Vol.1 Mysore, 1946.

**ಇಂಗ್ಲಿಷ್ ಪುಸ್ತಕಗಳು**

- Appadoraj A. – Economic Conditions in Southern India, Madras, 1936.
- Basavaraja K.R. – History and Culture of Karnataka Dharwar, 1984.
- Bhandarkar R.G. – Early History of the Deccan 3rd Edition, Calcutta, 1928.
- Bulher G. – Indian Palaeography Calcutta, 1959.
- Chidananda Murthy M. – Kannada Sasanagala Samskritika Adhyayana (A.d. 450-1150), Mysore 1966

- Chandrasekhara Sastri – Economic Conditions under the Hoysalas, Half Yearly Journal of the Mysore University Vol. 11, No.2, Mysore, 1928.
- Coelho, William-Hoysalavamsa Bombay, 1950.
- Karmarkar A.P. – Administrative Machinery in Medieval Karnataka QJMS XXX VIII PP. 435-52, Bangalore 1941.
- Krishna Rao M.V. – The Gangas of Talkad, Madras 1936.
- Krishna Rao M.V. and Keshava Bhat M. – Karnataka Itihasa Darshana, Bangalore, 1970.
- Krishna Sastri H. – The Hoysalas in and beyond Mysore. QJMS Vol. II, Madras, 1911.
- Krishna Swamy Aiyangar S. Rajendra – Hindu State in Southern India CH XVIII or Vol. III of the Cambridge History of India Cambridge, 1928.
- Kuppaswamy G.R. – Economic Conditions in Karnataka, Dharwar, 1975.
- Kuppuswamy Aiyangar, G.R. – Kalachuryas of Kalyani and their Times Unpublished Thesis, Mysore University, 1955.
- Leela Shantakumari S. – History of the Agraharas of Karnataka, Madras.
- Mahalingam T.V. – South Indian Polity Madras, 1955.
- Mahalingam T.V. – The Banas in South Indian History JIH for 1951 Trivandrum 1951.
- Mastivenkatesha Aiyangar – Popular Culture in Karnataka, 1937.
- Mugali R.S. – The Heritage of Karnataka, Bangalore, 1946.
- Nanjundayya H.V. and Anantha Krishna Iyet, - The Mysore Tribes and Castes Vol. II, 1928.
- Narasimhamurthy A.V. – The Coins of Karnataka, Mysore 1975.
- Nagaraja Rao C.K. – Pattamahadevi Shanthale, Bangalore.

- Nagaraja Rao C.K. – Veera Ganga Vishnuvardhana, Bangalore, 1992.
- Nilakanta Sastri K.A. – A History of South India Madras, 1955, (Revised Edn), 1965.
- Nilakanta Sastri K.A. – The Cholas (2nd Edn) Madras, 1955.
- Panchamukhi Vidyartna R.S. and Lakshminarayana Rao N – Dynastics of Karnataka Dharwar, 1946.
- Panchmuki, R.S. – Archaeology of Karnataka, Dharawar, 1953.
- Panukkar K.M. – Essential Features of Indian Culture, Bombay, 1964.
- Ramesh K.V. – History of South Kanara, Dharwar, 1970.
- Rice B. Lewis – Mysore and Coorg. Gazetter, Bangalore 1876-78.
- Rice – Mysore Gazateer. West Minister, 1897.
- Seletore B.A. – Ancient Karnataka Vol. I History of Tuluva, Poona, 1963.
- Saletore B.A. – Ancient Indian Political Thought and Institutions, Bombay, 1963.
- Settar S. – The Hoysala Temples, Dharwar, 1992.
- Setter S. – Inviting Death, Dharwar, 1986.
- Sircar D.C. – Studies in the Geography of Ancient and Medieval India, New Delhi.
- Srikantaiya S. – The Hoysala Empire QJMS Vol. VII PP. 292-310 and Vol VIII PP. 61-76, Bangalore 1917.
- Srikantasastry S. – Sources of Karnataka, History Vol. I Mysore, 1940.
- Shivanna K.S. – A Critique of Hoysal Polity, Mysore 1988.
- Sheik Ali B (Ed) – The Hoysala Dynasty, Mysore, 1972.
- Venkataraman, K.R. – The Hoysalas in the Tamil Country.
- Yazdani G. (Ed) – The Early History of Deccan Voes, 1-2, Bombay, 1960.

# ಕನ್ನಡ ಆಧಾರ ಗ್ರಂಥಗಳು


- ಅಣ್ಣಿಗೇರಿ ಎಂ.ಎಂ. ಮತ್ತು ಮೇವುಂಡಿ ಮಲ್ಲಾರಿ - ಶಾಸನ ಸಾಹಿತ್ಯ ಸಂಚಯ, ಧಾರವಾಡ -1956.
- ಅಣ್ಣಿಗೇರಿ ಎಂ.ಎಂ. ಮತ್ತು ಆರ್. ಶೇಷಶಾಸ್ತ್ರಿ- ಕನ್ನಡ ಶಾಸನ ಸಂಗ್ರಹ, ಬೆಂಗಳೂರು-1975.
- ಕರ್ನಾಟಕ ಪರಂಪರೆ - ಸಂ-1 ದಿವಾಕರ್.ಆರ್.ಆರ್. ಮೈಸೂರು ರಾಜ್ಯ ಸರ್ಕಾರ-1970.
- ಕರ್ನಾಟಕ ವಿಷಯ ವಿಶ್ವಕೋಶ – ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ-1977.
- ಡಾ|| ಕೃಷ್ಣ ಎಂ.ಎಚ್. – ಕನ್ನಡ ನಾಡಿನ ಚರಿತ್ರೆ – 1977 (ಸಂ-3) ಬೆಂಗಳೂರು.
- ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ – ಕರ್ನಾಟಕ ಇತಿಹಾಸ ದರ್ಶನ – ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳುರು-1970.
- ಚಿದಾನಂದ ಮೂರ್ತಿ ಎಂ. – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- ಜಯಪ್ಪಗೌಡ ಡಿ.ಎಸ್. – ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಶುಭೋಧಯ ಪ್ರಕಾಶನ, ಮೈಸೂರು-1983.
- ಜೋಶಿ ಎಸ್.ಬಿ. – ಕನ್ನಡ ನೆಲೆ, ಧಾರವಾಡ-1952.
- ತಿಪ್ಪೇರುದ್ರಸ್ವಾಮಿ ಎಚ್ – ಕರ್ನಾಟಕದ ಸಂಸ್ಕೃತಿ ಸಮೀಕ್ಷೆ, ಮೈಸೂರು -1961.
- ಡಾ.ದೇಸಾಯಿ ಪಾಂಡುರಂಗರಾಯರು - ಶಾಸನ ಪರಿಚಯ, ಧಾರವಾಡ-1956.
- ನರಸಿಂಹಚಾರ್.ಆರ್ - ಶಾಸನ ಪದ್ಯಮಂಜರಿ (ಕ್ರಿ.ಶ. 700-1465) ಬೆಂಗಳೂರು-1923.
- ನೇಮಿಚಂದ್ರ - ಲೀಲಾವತಿ ಪ್ರಬಂಧಮಂ - ಶಾರದಾ ಮಂದಿರ, ಮೈಸೂರು-1966.
- ಪಂಚಮುಖಿ ಆರ್.ಎಸ್. - ಕರ್ನಾಟಕದ ಶಿಲಾ ಶಾಸನಗಳು, ಧಾರವಾಡ-1953.
- ಪಂಚಮುಖಿ ಆರ್.ಎಸ್. – ಕರ್ನಾಟಕ ಹರಿದಾಸ ಸಾಹಿತ್ಯ, ಬೆಂಗಳೂರು- 1952.

- ಪಂಚಮುಖಿ. ಆರ್.ಎಸ್. ಮತ್ತು ಲಕ್ಷ್ಮಿ ನಾರಾಯಣರಾವ್ – ಕರ್ನಾಟಕದ ಅರಸು ಮನೆತನಗಳು ಸಂ–1, ಧಾರವಾಡ – 1946.
- ಮೇವಾಡಿ ಮಲ್ಲಾರಿ – ಕನ್ನಡ ಶಾಸನ ಸಂಗ್ರಹ, ಬೆಂಗಳೂರು – 1975.
- ಮುಗುಳಿ ಆರ್.ಎಸ್ – ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು – 1960.
- ರಮೇಶ್ ಕೆ.ವಿ. – ತುಳುನಾಡಿನ ಶಾಸನಗಳೂ – 1978.
- ರಮೇಶ್ ಕೆ.ವಿ. – ಕರ್ನಾಟಕ ಶಾಸನ ಸಂಹಿತೆ, ಬೆಂಗಳೂರು– 1971.
- ರಘುನಾಥ ಭಟ್ಟ ಎಚ್.ಆರ್. (ಸಂ) – ಕರ್ನಾಟಕದ ಶಾಸನಕಲೆ – ಭಾರತೀ ಪ್ರಕಾಶನ, ಮೈಸೂರು–1977.
- ಶಾಮಶಾಸ್ತ್ರಿ ಆರ್. – ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು–1982.
- ಶ್ರೀಕಂಠಶಾಸ್ತ್ರಿ.ಎಸ್–ಹೊಯ್ಸಳ ವಾಸ್ತುಶಿಲ್ಪ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ–1965.
- ಶ್ರೀಕಂಠಶಾಸ್ತ್ರಿ ಎಸ್ – ಭಾರತೀಯ ಸಂಸ್ಕೃತಿ, ಮೈಸೂರು 1975.
- ಶ್ರೀನಿವಾಸ ಮೂರ್ತಿ ಎಂ.ಆರ್. – ಭಕ್ತಿ ಭಂಡಾರಿ ಬಸವಣ್ಣನವರು, ಬೆಂಗಳೂರು–1936.
- ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–1936.
- ಡಾ. ಹಿರೇಮಠ ಆರ್.ಸಿ. ಮತ್ತು ಪ್ರೊ.ಎಂ.ಎಂ.ಕಲಬುರ್ಗಿ – ಕನ್ನಡ ಶಾಸನ ಸಂಪದ, ಧಾರವಾಡ–1968.

## ಗೆಜಟಿಯರ್ ಮತ್ತು ನಿಘಂಟುಗಳು

ಹಯವದನರಾವ್, ಮೈಸೂರು ಗೆಜಟಿಯರ್ ಸಂ 1 ರಿಂದ 5.1930.

Epigraphia Glossary – Sircar. D.C.

ಸೂರ್ಯನಾಥ ಕಾಮತ್. ಸಂ. ಕರ್ನಾಟಕ ರಾಜ್ಯ ಗೆಜಟಿಯರ್.

ಭಾಗ 1 : ಕರ್ನಾಟಕ ಸರ್ಕಾರ

ಭಾಗ 2 : 1982

ಕಿಟಲ್ – A Kannada English Dictionary Mangalore, 1984

ಕಿಟಲ್ – Kannada English Dictionary, Vol. I to IV, Madras, 1968

ಕನ್ನಡ ನಿಘಂಟು – ಕರ್ನಾಟಕ ಸಾಹಿತ್ಯ ಪರಿಷತ್, ಬೆಂಗಳೂರು (1970–80)

ಬಿ.ಎಲ್.ರೈಸ್. ಮೈಸೂರು ಗೆಜಟಿಯರ್ 1987.

ಇಂಗ್ಲೀಷ್ – ಕನ್ನಡ ನಿಘಂಟು ಮೈಸೂರು ವಿಶ್ವವಿದ್ಯಾನಿಲಯ – 1994

## JOURNALS

Annuals of Bhandarkar Oriented Research Institute, Poona

Half Yearly Journals of the Mysore University, Indian Antiquary.

Indian Historical Quarterly

Indian History Congress (Proceedings) Journal of Indian History

Journal of Bombay Branch of Royal Asciatic Society

Journal of Karnataka University Humanities and Social Sciences, Number.

Journal of Historical Studies

Journal of Historical Society University of Mysore

Journal of Indian Research Institute

Journal of Modern Review

Quarterly Journal of Mythic Society, Bangalore

Quarterly Journal of Andhra Historical Society

# ಹೊಯ್ಸಳರ ವಂಶಾವಳಿ



ಸಳ
ನೃಪಕಾಮ
(ಕ್ರಿ.ಶ. 1000–1045)
ವಿನಯಾದಿತ್ಯ
(ಕ್ರಿ.ಶ. 1045–1098)
ಎರೆಯಂಗ
(ಕ್ರಿ.ಶ. 1098–1100)
ಒಂದನೇ ಬಲ್ಲಾಳ
(ಕ್ರಿ.ಶ. 1100–1108)
ವಿಷ್ಣುವರ್ಧನ
(ಕ್ರಿ.ಶ. 1108–1152)
ಉದಯಾದಿತ್ಯ
ಬಲ್ಲಾಳದೇವ
ಒಂದನೆಯ ನರಸಿಂಹ
(ಕ್ರಿ.ಶ. 1152–1173)
ಎರಡನೆಯ ಬಲ್ಲಾಳ
(ಕ್ರಿ.ಶ. 1173–1220)
ಎರಡನೆಯ ನರಸಿಂಹ
(ಕ್ರಿ.ಶ. 1220–1235)
ಸೋಮೇಶ್ವರ
(ಕ್ರಿ.ಶ. 1235–1253)
ಮೂರನೆಯ ನರಸಿಂಹ
(ಕ್ರಿ.ಶ. 1253–1292)
ರಾಮನಾಥ
(ಕ್ರಿ.ಶ. 1253–1295)
ಮೂರನೆಯ ಬಲ್ಲಾಳ
(ಕ್ರಿ.ಶ. 1292–1342)
ವಿರೂಪಾಕ್ಷ ನಾಲ್ಕನೆಯ ಬಲ್ಲಾಳ
(ಕ್ರಿ.ಶ. 1342–1346)



ಶ್ರವಣಬೆಳಗೊಳ ಮುಖ್ಯ ರಸ್ತೆ

